

# "ಎಂ.ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯ"

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಸಂಶೋಧನ ಕೇಂದ್ರ ಬೀದರ ಇವರಿಗೆ ಎಂ.ಫಿಲ್. ಅಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ಶಿವಲೀಲಾ ಅಮೃತರಾವ

ಮಾರ್ಗದರ್ಶಕರು

**ಡಾ. ಜಗನ್ನಾಥ ಹೆಬ್ಬಾಳೆ**

ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಸಂಶೋಧನ ಕೇಂದ್ರ ಬೀದರ.



ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩೨೭೬

೨೦೧೩-೧೪

# ಪ್ರಮಾಣ ಪತ್ರ

**ಶ್ರೀಮತಿ. ಶಿವಲೀಲಾ ಅಮೃತರಾವ** ಇವರು ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಸಂಶೋಧನ ಕೇಂದ್ರ ಬೀದರನಲ್ಲಿ ಅಧ್ಯಯನ ಕೈಗೊಂಡು **"ಎಂ.ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯ"** ಎಂಬ ನಿಬಂಧವನ್ನು ಎಂ.ಫಿಲ್. ಪದವಗಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇದು ಇವರ ಮೂಲ ನಿಬಂಧವಾಗಿದ್ದು, ಈ ಮೊದಲು ಇದು ಇಡಿಯಾಗಿ ಇಲ್ಲವೇ ಬಿಡಿಯಾಗಿ, ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸಲಾಗಿದೆ.

**ಸ್ಥಳ : ಬೀದರ.**

**ದಿನಾಂಕ:** 16/6/14

**ಡಾ. ಜಗನ್ನಾಥ ಹೆಬ್ಬಾಳೆ**
**ಮಾರ್ಗದರ್ಶಕರು**
**ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ**
**ಸಂಶೋಧನ ಕೇಂದ್ರ ಬೀದರ.**

# ಘೋಷಣಾ ಪತ್ರ

**"ಎಂ.ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯ"** ಎಂಬ ನಿಬಂಧವನ್ನು ನಾನು **ಡಾ. ಜಗನ್ನಾಥ ಹೆಬ್ಬಾಳೆ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಇದನ್ನು ಇಡಿಯಾಗಿ ಇಲ್ಲವೆ ಬಿಡಯಾಗಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಪ್ರಮಾಣೀಕರಿಸುತ್ತಾ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಸಾದರ ಪಡಿಸುತ್ತಿದ್ದೇನೆ.

**ಸ್ಥಳ : ಬೀದರ.**

**ದಿನಾಂಕ:** 15-06-2014


**ಶ್ರೀಮತಿ. ಶಿವಲೀಲಾ ಅಮೃತರಾವ**
**ಸಂಶೋಧನಾ ವಿದ್ಯಾರ್ಥಿನಿ**
**ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ**
**ಸಂಶೋಧನ ಕೇಂದ್ರ ಬೀದರ.**

# ~: ಪರಿವಿಡಿ :~

# ಅಧ್ಯಾಯ ೧.

## ಪ್ರಸ್ತಾವನೆ :-

ಸಮಾಜವು ಇಂದು ತೀವ್ರವಾದ ಬದಲಾವಣೆಗಳಿಗೆ ಒಳಗಾಗುತ್ತಿದೆ. ವೈಜ್ಞಾನಿಕ, ಕೈಗಾರೀಕರಣ, ನಗರೀಕರಣ ಮತ್ತು ಗ್ರಾಮೀಣ ಪರಿಸರಗಳ ಫಲವಾಗಿ ಮಾನವನ ಆಲೋಚನೆಯ ರೀತಿ ಬದಲಾಗುತ್ತಿದೆ. ಸಂಸ್ಕೃತಿಗೆ ಪ್ರತಿ ಸಂಸ್ಕೃತಿಯ ಹೊಡೆತದಿಂದ ಸಮಾಜದ ಒಂದು ವರ್ಗ ಪ್ರತಿ ಸಂಸ್ಕೃತಿಯನ್ನು ಅನುಸರಿಸಿದವು. ಮತ್ತೊಂದು ವರ್ಗ ಎರಡನ್ನೂ ತಮ್ಮ ಅನುಕೂಲಕ್ಕೆ ಬಳಕೆ ಮಾಡಿಕೊಂಡವು. ಆದರೆ ಮೂಲ ಸಂಸ್ಕೃತಿಯ ಅನುಯಾಯಿಗಳ ಮುಗ್ಧತೆ, ನಂಬಿಕೆಗಳ ಮೇಲೆ ಪ್ರತಿ ಸಂಸ್ಕೃತಿಯವರು ಮಾಡುತ್ತಿರುವ ಶೋಷಣೆ, ಬಯಲಿಗೆ ಬಂದಿದ್ದೇ ಸಾಹಿತ್ಯ ಬರವಣಿಗೆಯಿಂದಾಗಿ. ಸಾಹಿತ್ಯವು ಸಾಮಾಜಿಕ ಸಮಸ್ಯೆಗಳನ್ನು ತನ್ನ ತೆಕ್ಕೆಗೆ ಸೇರಿಕೊಂಡಾಗಲೆ ಹಿಂದುಳಿದ ವರ್ಗಗಳಿಗೆ ತಮ್ಮ ಮೇಲಾಗುತ್ತಿರುವ ಅನ್ಯಾಯದ ಅರಿವು ಮೂಡಿದ್ದು, ಸ್ವಾತಂತ್ರ್ಯ ಪೂರ್ವ ಅಂದರೆ ೧೯ ನೇ ಶತಮಾನದವರೆಗೂ ಸಾಹಿತ್ಯ ಒಂದು ಕಲೆಯಾಗಿ ಮೇಲ್ವರ್ಗದ ಬದುಕಿನ ಅನಾವರಣವೇ ಆಗಿತ್ತು. ಆದರೆ ಪಾಶ್ಚಾತ್ಯರ ಪ್ರಾಭಾವವಾದ ಮೇಲೆ ಸಾಹಿತ್ಯ ತನ್ನ ದಿಕ್ಕು ಬದಲಿಸಿ ಪ್ರತಿಭಟಿಸಿತು.

ಕನ್ನಡ ಸಾಹಿತ್ಯ ೨೦ನೇ ಶತಮಾನದಲ್ಲಿ ಹಲವಾರು ಪ್ರಕಾರಗಳನ್ನು ಸ್ವೀಕರಿಸಿ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡಿತು. ಭಾವಗೀತೆ, ಕಾದಂಬರಿ, ಸಣ್ಣಕತೆ, ನಾಟಕ, ಆತ್ಮಕಥೆ, ಮಾಹಾಕಾವ್ಯ ಮತ್ತು ಸಂಸ್ಕೃತಿ ಅಧ್ಯಯನ ಸಂಶೋಧನೆಗಳು, ಸಾಹಿತ್ಯವನ್ನು ಚುರುಕುಗೊಳಿಸಿದ್ದವು. ಹೀಗೆ ವಿಫುಲವಾಗಿ ಬೆಳೆದಂತಹ ಸಾಹಿತ್ಯವನ್ನು ಸಂಶೋಧನೆ ತನ್ನ ವ್ಯಾಪ್ತಿಗೆ ಸೇರಿಸಿಕೊಂಡು ಹಲವು ಆಯಾಮಗಳೊಡನೆ ಅಧ್ಯಯನ ನಡೆಸುತ್ತಿದೆ. ಪ್ರಾಚೀನ ಕುರುಹುಗಳನ್ನು ಶೋಧಿಸಿ ತೆಗೆದು ಅಧ್ಯಯನ ನಡೆಸುವುದು, ಅದರ ಮೂಲಕ ರಾಜ್ಯ, ಭಾಷೆಯ ಪ್ರಾಚೀನತೆಯನ್ನು ಕಂಡುಹಿಡಿಯುವುದು, ನಿಜವಾದ ಸಂಶೋಧನೆ ಎನಿಸಿಕೊಂಡಿತ್ತು. ಅದರ ಜೊತೆಗೆ ಇಂದು ಪ್ರಾಚೀನದಿಂದ ಇಂದಿನವರೆಗೆ ಬರೆದ ಸಾಹಿತ್ಯವನ್ನು ಸಂಶೋಧನೆಯ ವಸ್ತುವಾಗಿಸಿ ಅದರ ಮೂಲಕ ಕವಿ, ಕಾಲ, ದೇಶ, ಭಾಷೆ, ವರ್ಗ, ವಂಶ, ಸಂಸ್ಕೃತಿಯನ್ನು ತಿಳಿಯುವ ಹೊಸ ಪ್ರಯತ್ನ ಆರಂಭಗೊಂಡಿದೆ.

ಹೊಸ ಅಧ್ಯಯನದ ಒಳಗೆ ತೌಲನಿಕ ಅಧ್ಯಯನ, ಒಬ್ಬ ಕವಿಯ ಸಾಹಿತ್ಯದ ಅಧ್ಯಯನ, ಭಾಷೆಯ ಅಧ್ಯಯನ ಜನಪದ ಅಧ್ಯಯನ ಮತ್ತು ಪ್ರಕಾರಗಳ ಅಧ್ಯಯನವು ರೂಢಿಯಲ್ಲಿದೆ. ಪ್ರಕಾರಗಳಲ್ಲಿ ಮಹಾಕಾವ್ಯಗಳ ಅಧ್ಯಯನ, ಕಾದಂಬರಿಗಳ ಅಧ್ಯಯನ, ಕಾವ್ಯಗಳ ಅಧ್ಯಯನಗಳು ನಡೆದಷ್ಟು ಸಣ್ಣಕತೆಗಳ ಮೇಲೆ ಇನ್ನೂ ಸಾಕಷ್ಟು ಅಧ್ಯಯನಗಳು ನಡೆಯುತ್ತಿವೆ. ಅದರ ಮೂಲಕ ಸಾಹಿತ್ಯದ ವಾಸ್ತವ ನಡಿಗೆಯನ್ನು ಅರಿಯುವ ಯೋಗ್ಯ ಅಧ್ಯಯನಗಳು ಸಂಶೋಧನೆಯ ಮೂಲಕ ಸಿಗುತ್ತಿರುವದು ಸಂತೋಷದ ಸಂಗತಿ. ಹೀಗೆ ಕನ್ನಡ ಸಾಹಿತ್ಯವು ಹಲವಾರು ಪ್ರಕಾರಗಳನ್ನು ತನ್ನ ತೆಕ್ಕೆಯೊಳಗೆ ಸೇರಿಸಿಕೊಂಡು ಬೃಹತ್ತಾಗಿ ಬೆಳೆದು ಬಂದಿದೆ. ಇದರಲ್ಲಿ "ಸಣ್ಣಕಥೆ" ಪ್ರಕಾರವು ಒಂದು. ಇತ್ತೀಚಿನ ದಿನಗಳಲ್ಲಿ ಇದು ಒಂದು ಪ್ರಕಾರವಾದರೂ ಪ್ರಾಚೀನದಿಂದಲೂ ಕಥೆ ಹೇಳುವ, ಕೇಳುವ ರೂಢಿ ಇದೆ. ನಮ್ಮ ಸಂಸ್ಕೃತಿಗೆ ಕನ್ನಡಿ ಹಿಡಿದಂತೆ ಜನಪದ ಕಥೆಗಳು ಜನರಿಂದ ಜನರಿಗೆ ಹಂಚಿಕೆಯಾಗುತ್ತಾ ಬಂದಿದೆ. ಇಂತಹ ಕಥೆಗಳಿಗೆ ಅಜ್ಜೀ ಕಥೆಗಳೆಂದು ಕರೆದದ್ದು ಉಂಟು. ಇಂತಹ ಕಥೆಗಳು ರಾಜಮಹಾರಾಜರ ಸಾಹಸವನ್ನು ಕುರಿತು ಕಾಲ್ಪನಿಕವಾಗಿ ರಚಿಸಲಾಗುತ್ತಿತ್ತು. ಇದು ೧೫ನೇ

ಶತಮಾನದ ಮುದ್ದಣ್ಣನವರೆಗೂ ಮುಂದುವರೆಯುತ್ತಾ ಬಂದಿದೆ. ಆದರೆ ೨೦ನೇ ಶತಮಾನದ ಆರಂಭದಿಂದೀಚೆಗೆ ಭಾರತೀಯ ಜನಜೀವನದಲ್ಲಾದ ಬದಲಾವಣೆ ಅನ್ಯ ಸಂಸ್ಕೃತಿಯ ಪ್ರಭಾವದಿಂದ ದೇಸಿ ಸಂಸ್ಕೃತಿಯ ಮೇಲಾಗಬಹುದಾದ ಹೊಡೆತದ ಅರಿವಿದ್ದ ಸ್ವತಂತ್ರ ಪೂರ್ವ ಲೇಖಕರು ದೇಸಿಯ ಚಿಂತನೆಯುಳ್ಳ ಕಥೆಗಳನ್ನು ರಚಿಸಿದರು. ಹೀಗೆ ಶುರುವಾದ ಕಥೆಗಳು ಆಯಾಕಾಲದ ಸಮಸ್ಯೆಗಳನ್ನು ವಸ್ತುವಾಗಿಸಿ, ಪರಿಹಾರವನ್ನೊದಗಿಸಿಯೋ, ಸಮಸ್ಯೆಯನ್ನು ತೋರಿಸುತ್ತಾ ಪರಿವರ್ತನೆಯ ಚಿಂತನೆಯನ್ನು ಬಿತ್ತುತ್ತಾ ಬಂದಿವೆ. ಭಾಷೆಯಲ್ಲಿ ಸರಳವಾಗಿ, ನೇರವಾಗಿ, ಸೂಕ್ಷ್ಮವಾಗಿ ಹೇಳುವ ಪ್ರವೃತ್ತಿ ಈ ಕಥನ ಸಾಹಿತ್ಯಕ್ಕೆ ಪ್ರಾಪ್ತವಾದುದು ಇತ್ತೀಚಿನ ಕಥೆಗಳ ಹೆಗ್ಗಳಿಕೆ.

ಕನ್ನಡದಲ್ಲಿ ಕಾದಂಬರಿಯ ನಂತರ ಹೆಚ್ಚು ಜನ ಪ್ರಿಯತೆಯನ್ನು ಗಳಿಸಿದ ಸಾಹಿತ್ಯಿಕ ರೂಪವೆಂದರೆ ಅದು ಸಣ್ಣಕತೆಯಾಗಿದೆ. ಸಣ್ಣಕತೆಯ ರಚನೆಗೆ ತೊಡಗಿದ ಮೊದಲಿಗರು ಪಂಜೆ ಮಂಗೇಶರಾಯರು. ಆಧುನಿಕ ಮತ್ತು ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದ ಸಣ್ಣಕತೆಯು ಬೂದಿ ಮುಚ್ಚಿದ ಕೆಂಡದ ಹಾಗೆ ಬೆಳೆಯಲು ಪ್ರಾರಂಭಿಸಿತು. ಮೊಟ್ಟಮೊದಲನೆಯದಾಗಿ ಹಳೆಯ ಮೈಸೂರಿನ ಭಾಗದಲ್ಲಿ ಮೂಡಿಬಂದ ಸಣ್ಣಕತೆ ನಂತರದಲ್ಲಿ ಇತರ ಪ್ರದೇಶಗಳಿಗೆ ಹರಡತೊಡಗಿತ್ತು. ಈ ಸಾಹಿತ್ಯದಲ್ಲಿ ಹಲವಾರು ಕಥೆಗಾರರು ತಮ್ಮ ಕೊಡುಗೆಯನ್ನು ನೀಡಿದ್ದಾರೆ. ದಿ.ಕೆರೂರು ವಾಸುದೇವಚಾರ್ಯರು ಹಾಗೂ ಎಂ. ಎನ್. ಕಾಮತ್ ಮುಂತಾದ ಕಥೆಗಾರರು ಕಥಾ ರಚನೆಗೆ ಮೊದಲು ಹೆಜ್ಜೆಯನ್ನು ಇಟ್ಟಿದ್ದಾರೆ.

ಮುಂದೆ ಈ ಸಾಹಿತ್ಯ ಉನ್ನತ ಶಿಖರಕ್ಕೆ ಏರಲು ಕಾರಣರಾದವರು ಶ್ರೀನಿವಾಸರು. ಇವರ ಕಥೆಗಳು 'ಗೌತಮಿ ಹೇಳಿದ ಕಥೆ', 'ಮಸೂರಿನ ಮಂಗಮ್ಮ', 'ರಂಗಪ್ಪನ ಮದುವೆ', 'ರಂಗಪ್ಪನ ದೀಪಾವಳಿ', 'ವೆಂಕಟಸ್ವಾಮಿಯ ಪ್ರಣಯ', ' ವಸುಮತಿ' ಮುಂತಾದ ಕಥೆಯಲ್ಲಿ ಸಾಮಾಜಿಕ ಪ್ರಜ್ಞೆ ಮತ್ತು ಮಾನವೀಯ ಮೌಲ್ಯವನ್ನು ಕಾಣುತ್ತೇವೆ

ಇವರಷ್ಟೇ ಅಲ್ಲದೆ ಕುವೆಂಪು, ಬೇಂದ್ರೆ, ನರಸಿಂಹಶಾಸ್ತ್ರಿ, ಆನಂದಕಂದ ಮೊದಲಾದವರು ಈ ಕ್ಷೇತ್ರದಲ್ಲಿ ಕೃಷಿಗೈದಿದ್ದಾರೆ. ಪ್ರಗತಿಶೀಲ ಪಂಥದಲ್ಲಿ, ಪ್ರಗತಿ ಪಥದ ಕಥೆಗಳು ಹೊರಹೊಮ್ಮಿದವು. ಅ.ನ.ಕೃ ಅವರ 'ಅಗ್ನಿ ಕನ್ಯೆ', 'ಕಾಮನ ಬಿಲ್ಲುಗಳು', ತ.ರಾ.ಸು. ಅವರ '೦–೦=೦', 'ಗಿರಿಮಲ್ಲಿಗೆ' ಪ್ರಸಿದ್ಧ ಕತೆಗಳಾಗಿವೆ.

ನವ್ಯ ಪಂಥದಲ್ಲಿ ಯು.ಕೆ. ಸದಾಶಿವ, ರಾಮಚಂದ್ರಶರ್ಮಾ, ಗಂಗಾಧರ ಚಿತ್ತಾಲ, ಮೊದಲಾದವರು. ಮುಂದೆ ದಲಿತ ಬಂಡಾಯ ಸಾಹಿತ್ಯದಲ್ಲಿ ಇಳಿಮುಖವನ್ನು ಕಂಡಿತು ಈ ಸಣ್ಣಕತೆ. ಕೆಲವು ಪ್ರಮುಖರು ಮಾತ್ರ ಈ ಘಟ್ಟದಲ್ಲಿ ಕಥೆಗಳನ್ನು ಬರೆದಿದ್ದಾರೆ. ಅವರಲ್ಲಿ ದೇವನೂರು ಮಹಾದೇವ, ಬೋಳುವಾರ, ಮಹ್ಮದ, ಕುಂಞ ಮೊದಲಾದವರು.

➢ ಸಮಷ್ಠೀಕರಣ : –

ಇಂತಹ ಸಮೃದ್ಧವಾದ ಸಾಹಿತ್ಯ ಬೆಳೆಯುತ್ತಿರುವ ಸಂದರ್ಭದಲ್ಲಿ ಹೈದ್ರಾಬಾದ ಕರ್ನಾಟಕ ಪ್ರಾಂತ್ಯದಲ್ಲಿ ಸಣ್ಣಕಥೆ ಸಾಹಿತ್ಯ ಇತ್ತೆ? ಎನ್ನುವ ಪ್ರಶ್ನೆ ಕಾಡತೊಡಗುತ್ತದೆ. ಈ ಸಂದರ್ಭದಲ್ಲಿ ಅಂದರೆ ನವೋದಯ ಕಾಲದಲ್ಲಿ ತತ್ವ ಪದಗಳು, ಪುರಾಣಗಳು, ಜನಪದ ಕಥೆಗಳು ಇಲ್ಲಿ ಹೆಚ್ಚು

ಜನಪ್ರಿಯತೆಯನ್ನು ಹೊಂದಿದ್ದವು. ನಮ್ಮ ಭಾಗದಲ್ಲಿ ಅಂದರೆ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಕಥಾ ಸಾಹಿತ್ಯ ಹಿಂದುಳಿಯಲು ಕಾರಣವೇನು? ದೇಶಕ್ಕೆ ಸ್ವಾತಂತ್ರ್ಯ ಬಂದರೂ ಕೂಡ ಹೈದ್ರಬಾದ ಕರ್ನಾಟಕ ಪ್ರಾಂತ್ಯಕ್ಕೆ ಸ್ವತಂತ್ರ ದೊರೆಯಲಿಲ್ಲ. ಸಂಸ್ಥಾನಗಳನ್ನು ವಿಲೀನಿಕರಣ ಮಾಡಿದಾಗ ಈ ಪ್ರಾಂತ್ಯಕ್ಕೆ ಸ್ವತಂತ್ರ ಸಿಕ್ಕಿತ್ತು. ಸ್ವತಂತ್ರದ ಪೂರ್ವದಲ್ಲಿ ನಮ್ಮ ಭಾಗಕ್ಕೆ ಹಲವಾರು ಭಾಷೆಗಳ ಪ್ರಭಾವವನ್ನು ನಾವು ಕಾಣುತ್ತೇವೆ. ಅಷ್ಟೇ ಅಲ್ಲದೆ ಹೈದ್ರಾಬಾದ ನಿಜಾಮನ ಆಳ್ವಿಕೆಯು ಕೂಡ ಒಂದು ದಟ್ಟದಾರಿದ್ರೇಯ ಪ್ರಭಾವ ಎಂದು ಹೇಳಿದರೂ ತಪ್ಪಾಗಲಾರದು. ಜೊತೆಗೆ ಹಿಂದುಳಿದ ಜನಾಂಗದ ಆರ್ಥಿಕ, ಸಾಮಾಜಿಕ, ರಾಜಕೀಯ ಏರುಪೇರುಗಳು ಕೂಡ ಕಾರಣವಾಗಿವೆ. ಅಷ್ಟೇ ಅಲ್ಲದೆ ಈ ಪ್ರಾಂತ್ಯದಲ್ಲಿ ನಾಗರಿಕ ಜನಾಂಗ, ಅನಾಗರಿಕ ಜನಾಂಗದ ಗಲಭೆಗಳು ಕೂಡ ಕಾರಣವಾಗಿವೆ. ಈ ಎಲ್ಲ ಅಂಶಗಳಿಂದ ಈ ಪ್ರದೇಶವು ಹಿಂದುಳಿದ ಹಣೆಪಟ್ಟಿಯನ್ನು ಹೊತ್ತು ನಿಂತಿದೆ.

ನವೋದಯದ ನಂತರದಲ್ಲಿ ಅಂದರೆ ೧೯೬೭ರಲ್ಲಿ ಗುಲಬರ್ಗಾದಿಂದ 'ಸನ್ಮಾನ' ಎನ್ನುವ ಪ್ರಾತಿನಿಧಿಕ ಕಥಾಸಂಕಲನ ಈ ಭಾಗದಿಂದ ಹೊರಬಂದ ಮೊಟ್ಟಮೊದಲ ಕಥಾಸಂಕಲನವಾಗಿದೆ. ನಂತರದಲ್ಲಿ ಹಲವಾರು ಹೆಸರಾಂತ ಕಥೆಗಾರರು ಕಥಾಸಂಕಲನಗಳನ್ನು ರಚಿಸಿದ್ದಾರೆ. ಅವರುಗಳಲ್ಲಿ ಡಾ. ಸಿದ್ದಯ್ಯ ಪುರಾಣಿಕರ 'ಕಥಾಮಂಜರಿ', ತುಷಾರಹಾರ' ಜಯತೀರ್ಥರಾಜ ಪುರೋಹಿತರ 'ಪಾರವ್ವನ ಪಂಚಾಯ್ತಿ', 'ಮೌಲ್ಯಗಳು', 'ಶಿಥಿಲಶಿಲೆ', 'ರೋಹಿಣಿ', ಡಾ.ದೇವೇಂದ್ರ ಕುಮಾರ ಹಕಾರಿಯವರ 'ಚಾಟ', 'ಒರೆಗಲ್ಲು' ಡಾ.ಚೆನ್ನಣ್ಣ ವಾಲೀಕಾರ ಅವರ 'ಸಮಗ್ರ ಕಥಾ ಸಂಪುಟ', ಗೀತಾ ನಾಗಭೂಷಣ ಅವರ 'ಜ್ವಲಂತ', 'ಅವ್ವ' ಮತ್ತು ಇತರ ಕಥೆಗಳು, ಬಿ.ಟಿ. ಲಲಿತನಾಯಕ, ಶಾಂತರಸ ಮುಂತಾದ ಪ್ರಸಿದ್ಧ ಕಥೆಗಾರರಾಗಿದ್ದಾರೆ. ಈ ಕಥಾ ಸಾಹಿತ್ಯವು ಬೀದರ ಜಿಲ್ಲೆಗೆ ಹರಿದುಬಂದಿದ್ದು ಯಾವಾಗ? ಈ ಕ್ಷೇತ್ರದಲ್ಲಿ ಮೊದಲು ಕೃಷಿಗೈದವರು ಯಾರು? ಎನ್ನುವ ಪ್ರಶ್ನೆಗಳು ಕಾಡತೊಡಗುತ್ತವೆ. ಬೀದರ ಜಿಲ್ಲೆಯಲ್ಲಿ ಮೊದಲು ಸಣ್ಣಕತೆಯನ್ನು ಹೊರತಂದ ಕೀರ್ತಿ ಜಿ.ಬಿ.ವಿಸಾಜಿ. ಅವರಿಗೆ ಸಲ್ಲುತ್ತದೆ. ಇವರ ಕಥಾ ಸಂಕಲನ 'ಅನಂತ ಸಂಗಮ'. ನಂತರದ ದಿನಗಳಲ್ಲಿ ಈ ಕ್ಷೇತ್ರದಲ್ಲಿ ಹಲವಾರು ಕಥೆಗಾರರು ಕಥಾಸಂಕಲನವನ್ನು ಹೊರತಂದಿದ್ದಾರೆ. ಶ್ರೀಕಾಂತ ಪಾಟೀಲ, ಗುರುನಾಥ ಅಕ್ಕಣ್ಣ, ಶಿವಕುಮಾರ ನಾಗವಾರ, ಎಂ.ಜಿ. ದೇಶಪಾಂಡೆ, ಜೆ.ಎಸ್.ಖೂಬಾ ಡಾ.ಜಿ.ಬಿ. ವಿಸಾಜಿ, ದೇಶಾಂಶ ಹುಡುಗಿ, ಪ್ರೊ ಸೂಗಯ್ಯ ಹಿರೇಮಠ, ಕೆ.ನೀಲಾ, ಡಾ.ಜಯದೇವಿ ಗಾಯಕವಾಡ ಮೊದಲಾದವರು.

ಬೀದರ ಜಿಲ್ಲೆಯ ವ್ಯಾಪ್ತಿಗೆ ಸೇರಿದ ಹಲವಾರು ಕಥೆಗಾರರಲ್ಲಿ ಎಂ.ಜಿ. ದೇಶಪಾಂಡೆ ಅವರು ಸಹ ಒಬ್ಬರು. ಇವರು ಸಾಹಿತ್ಯದತ್ತ ಒಲವು ತೋರಲು ಕಾರಣ ಯಾವುದು? ಎನ್ನುವ ಪ್ರಶ್ನೆ ಇಲ್ಲಿ ಬಂದಾಗ, ಅವರ ಜೀವನದ ಕಹಿ ನೆನಪುಗಳ ಮರೆಯುವಿಕೆ ಹಾಗೂ ಸುತ್ತ – ಮುತ್ತಲಿನ ಪರಿಸರ ಮತ್ತು ಗೌತಮ ಬುದ್ಧನ ಬಾಳಿನ ಚರಿತ್ರೆಯ ಓದು, ಮತ್ತು ಸಂತ ಗುರುಮ್ವಾಂರವರ ಪ್ರವಚನದ ಕೇಳುವಿಕೆ ಅವರನ್ನು ಸಾಹಿತ್ಯ ರಚನೆಗೆ ತೊಡಗಿಸಿಕೊಳ್ಳುವಂತೆ ಮಾಡಿದವು.

- ➢ <u>ಅಧ್ಯಯನದ ಫಲಿತಗಳು:-</u>

ಎಂ. ಜಿ. ದೇಶಪಾಂಡೆ ಅವರು ಸರಳ, ಸಜ್ಜನಿಕೆ, ವ್ಯಕ್ತಿತ್ವವನ್ನು ಹೊಂದಿದ್ದು, ಸೃಜನಶೀಲ ಬರಹಗಾರರು. ಜೀವನದ ಹಲವು ಮಜಲುಗಳನ್ನು ಕಂಡ ಇವರು ಸಾಹಿತ್ಯದಲ್ಲಿ , ಪ್ರತಿಭೆ

ಪರಿಶ್ರಮವನ್ನು ಎತ್ತಿ ಹಿಡಿದವರು. ಜಾತಿ, ಮತ, ಪಂಥಗಳ ಆಚೆ ದಾಟಿ ಬೆಳೆದ, ಜೊತೆಗೆ ಆತ್ಮೀಯರಾಗಿ ಬೆರೆಯುವ ಸರಳ ಸಜ್ಜನಿಕೆ ಇವರದು.

ಎಂ. ಜಿ. ದೇಶಪಾಂಡೆ ಅವರು ಈಗಾಗಲೇ ಅನೇಕ ವರ್ಷಗಳಿಂದ ಹಲವು ಸಾಹಿತ್ಯ ಪ್ರಕಾರಗಳ ಜೊತೆಗೆ ಸಣ್ಣಕತೆಗಳ ಮೇಲೆ ಬೆಳಕು ಚೆಲ್ಲಿದವರು. ಸುಮಾರು ವರ್ಷಗಳ ಪೂರ್ವದಲ್ಲಿ ಬೀದರ ಜಿಲ್ಲೆಯಿಂದ ಅತ್ಯಂತ ಪರಿಣಾಮಕಾರಿಯಾಗಿ ಹಾಗೂ ಪುಟ್ಟ ಕತೆಗಳು ಪುಟಕ್ಕೆ ಮಿರಿ ಬೆಳೆಯದಂತೆ ಕಥೆಗಳನ್ನು ರಚಿಸಿದ ಶ್ರೇಯ ಇವರದು. ಇವರು ಸಹಕಾರ ಬ್ಯಾಂಕ್ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವಾಗಲೇ ಸಾಹಿತ್ಯದಲ್ಲಿ ಅಧ್ಯಯನಶೀಲರಾಗಿ ಜಿಲ್ಲೆಯಲ್ಲಿ ಪ್ರಭಾವಿ ಕಥೆಗಾರರಾಗಿ ಬೆಳೆದವರು. ಇವರು 'ಹೆಣ', 'ಗಜ್ರ', 'ನಿಂಗಿ' ಹೀಗೆ ಅನೇಕ ಗ್ರಾಮ್ಯ ಜೀವನದ ಹಳ್ಳಿಯ ಬದುಕುಗಳನ್ನು ಪುಟಗಳಲ್ಲಿ ಚಿತ್ರಿಸಿರುವ ಹೆಗ್ಗಳಿಕೆ ಇವರದು.

ದೇಶಪಾಂಡೆಯವರು ಮೂಲತಃ ಉಚ್ಚ ಕುಟುಂಬದಿಂದ ಬಂದಿದ್ದರೂ ಜನಪದ ಕಾಳಜಿ ಹೊಂದಿರುವ ಜಾತಿ-ಸಮಾನತೆಯನ್ನು ಒತ್ತುಕೊಡುವ ವ್ಯಕ್ತಿತ್ವ ಸಿರಿಯುಳ್ಳವರು. ಜೊತೆಗೆ ಸೌಂದರ್ಯೋಪಾಸಕರು ಹೌದು. ನಾವು ಹೊಸಗನ್ನಡ ಸಾಹಿತ್ಯದಲ್ಲಿ ಕಾವ್ಯ, ನಾಟಕ, ಕಥೆ, ಕಾದಂಬರಿ ಜೀವನ ಚರಿತ್ರೆ, ಹೀಗೆ ಹಲವಾರು ಸಾಹಿತ್ಯದ ಪ್ರಕಾರಗಳನ್ನು ಕಾಣುತ್ತೇವೆ. ಆದರೆ ಇಲ್ಲಿಯವರೆಗೆ ದೇಶಪಾಂಡೆಯವರ ಎಲ್ಲಾ ಕಥೆಗಳ ಮೇಲೆ ಸಂಶೋಧಕರು ಬೆಳಕು ಚೆಲ್ಲಿರುವುದನ್ನು ನಾವು 'ಕಾಣುವುದಿಲ್ಲ.

ಆದರೆ ಇವರ ಕಥೆಗಳಲ್ಲಿ ಸಮಾಜ ಸುಧಾರಣೆ ಬಡಜನರ ಬಗ್ಗೆ ಕಳಕಳಿ, ಕೌಟುಂಬಿಕ ಚಿತ್ರಣ, ವಿಧವಾ ವಿವಾಹ, ಶೋಷಣೆ ಮುಂತಾದವುಗಳು, ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿರುವುದು ಕಾಣುತ್ತೇವೆ. ಸ್ನೇಹಿತರ ನೇರ ನಿಷ್ಠುರವಾಗಿ ಬರೆಯುವ ಕಥೆಗಳಲ್ಲಿ ಸಮಾಜಿಕ ಕಳಕಳಿ ಇದೆ, ವ್ಯವಸ್ಥೆಯ ಬಗ್ಗೆ ಆಕ್ರೋಶವಿದೆ, ರಾಜಕೀಯ ಜನತೆಯ ಬಗ್ಗೆ ದೂಷಣೆ ಇದೆ, ಹಿಗೆ ಇವರಿಗೆ ಸಾಮಾಜಿಕ ಕಳಕಳಿ ಇದೆ. ಮಾಸ್ತಿಯವರ ಕಥೆಗಳ ಛಾಪು ಜೊತೆಗೆ ಕೃಷ್ಣಮೂರ್ತಿ ಪುರಾಣಿಕರು, ತ.ರಾ.ಸು ಬರಹಗಳ ಪ್ರಭಾವ ಇವರ ಕತೆಗಳಲ್ಲಿ ನಾವು ಕಾಣುತ್ತೇವೆ. ಶ್ರೀಯುತ ಅತ್ಯಂತ ಪ್ರಭಾವಶಾಲಿ ಕತೆಗಾರರ ಪ್ರಭಾವ ಇವರ ಕಥೆಗಳಲ್ಲಿ ಎದ್ದು ಕಾಣುತ್ತದೆ. ಹಳ್ಳಿಯ ಜೀವನವನ್ನು ಅತ್ಯಂತ ಸುಂದರ ರೀತಿಯಲ್ಲಿ ಹಿಡಿದಿಡುವುದು ದೇಶೀ ಭಾಷೆಯನ್ನು ಸಮೃದ್ಧವಾಗಿ ಬೆಳೆಸಿರುವುದು ನಾವು ಕಾಣುತ್ತೇವೆ. ಇವರ ಅನೇಕ ಕತೆಗಳು ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪತ್ರಿಕಾ ಕ್ಷೇತ್ರದಲ್ಲಿ, ಪತ್ರಿಕಾ ಸಾಹಿತ್ಯಕ್ಕೆ ಒತ್ತುಕೊಡುವ ನಿಟ್ಟಿನಲ್ಲಿ ಸಾಹಿತ್ಯ ಹರವಿಕೊಂಡಿದೆ. ಅನೇಕ ವಿಷಯಗಳು ಕಥೆಗಳ ವಸ್ತುಗಳಾಗಿರುವುದು ನಿಜಕ್ಕೂ ಸಾಮಾಜಿಕ ಪರಿಸರದಲ್ಲಿ ಎದ್ದುಕಾಣುವ ಕಥೆಗಳಾಗಿವೆ.

ಎಂ. ಜಿ. ದೇಶಪಾಂಡೆ ಅವರ ಎಲ್ಲಾ ಕಥೆಗಳು ಈಗಾಗಲೇ ಯಾರೂ ಆಯ್ಕೆ ಮಾಡದ ನಿಟ್ಟಿನಲ್ಲಿ ನಾನು ಇವರ ಸಮಗ್ರ ಕಥಾ ಸಾಹಿತ್ಯವನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವೆನು. ಇವರ ಕಥೆಗಳಲ್ಲಿನ ವಸ್ತುನಿಷ್ಠತೆಯನ್ನು ವ್ಯಕ್ತಿತ್ವವನ್ನು ದೃಶ್ಯಗಳನ್ನು, ಉದ್ದೇಶಗಳನ್ನು ಬಿಡಿಸುವ ನಿಟ್ಟಿನಲ್ಲಿ ಕಥೆಗಳು ಅದರ ಮೇಲೆ ಬೆಳಕು ಚೆಲ್ಲಿದುದು ಸಮಂಜಸವೆನಿಸಿದೆ. ಓದುಗರಿಗೆ ಓದಿಸಿಕೊಂಡು ಹೋಗುವುದರ ಜೊತೆಗೆ ಕಥೆಗಳು ಪರಿಣಾಮಕಾರಿಯಾಗಿ ವ್ಯವಸ್ಥೆಯನ್ನು ಹಿಡಿದಿಡುವ ಕಥೆಗಳು ಪರಿಣಾಮಕಾರತ್ವವನ್ನು ಮೂಡಿಸುತ್ತವೆ. ಮಾನವೀಯ ಮಿಡಿತಗಳು, ಸಮಾಜದ ವಿರುದ್ಧ

ಬಂಡೇಳುವ, ಹೆಣ್ಣಿನ ಶೋಷಣೆಯ ಬಗ್ಗೆ ದನಿ ಎತ್ತುವ, ಜಾತಿಯನ್ನು ಆರಾಧಿಸುವವರಿಗೆ ಕೊಡಲಿ ಏಟು ಕೊಡುವ ನಿಟ್ಟಿನಲ್ಲಿ ಇವರು ಸೃಜನಶೀಲರಾಗಿ ತಮ್ಮ ಕಥೆಗಳಲ್ಲಿ ಬಿಂಬಿಸಿದ್ದಾರೆ. ಇವರು ಕಂಡದ್ದನ್ನು ನೇರ ಕೆಲವೊಮ್ಮೆ ನಿಷ್ಠುರವಾಗಿ ಬರೆದಿರುವ ತಮ್ಮ ಬರಹಗಳಿಗೆ ಬೆಳಕನ್ನು ಕೊಟ್ಟಿದ್ದಾರೆ.

ಇವರ ಕಥೆಗಳಿಂದ ಸಮಾಜದ ಸುಧಾರಣೆಯಾಗುವಲ್ಲಿ ಬಹುಪಾಲಿನ ಶ್ರಮವಿದೆ. ಕಥೆಗಳು ಹೇಳುವ ಮೂಲಕವೇ ಸಮಾಜದ ದೋಷವನ್ನು ಖಂಡಿಸುವ ಇವರ ಲೇಖನಿಯಲ್ಲಿ ಗಡಸುತನವಿರುವುದು ಕಂಡುಬರುತ್ತದೆ.

ಒಟ್ಟಿನಲ್ಲಿ ಇವರ ಕಥೆಗಳು ಸಾಮಾಜಿಕ, ಸಾಂಸ್ಕೃತಿಕ ಹಾಗೂ ಪ್ರೀತಿ-ಪ್ರಣಯ, ಆದರ್ಶಬದುಕನ್ನು ಚಿತ್ರಿಸುವ ಇವರು ಬೀದರ ಜಿಲ್ಲೆಯಲ್ಲಿ ಮಹತ್ವಪೂರ್ಣ ಕಥೆಗಾರರಾಗಿರುವುದು ಹೆಮ್ಮೆಯ ವಿಷಯವಾಗಿದೆ.

➢ <u>ಅಧ್ಯಯನದ ಉದ್ದೇಶ :-</u>

ಇಪ್ಪತ್ತನೇಯ ಶತಮಾನದ ಸಾಹಿತ್ಯ ಚರಿತ್ರೆ ಅತ್ಯಂತ ವೈವಿಧ್ಯತೆ ಹಾಗೂ ವ್ಯಾಪಕತೆಯನ್ನು ಪಡೆದಿದೆ. ದೇಸಿಯ ಸಂಸ್ಕೃತಿಯ ಚಿಂತನೆಗೆ ದಿಕ್ಕು ತೋರಿ, ಎಲ್ಲೋ ಮರೆಯಾಗಿ ಯಾರಿಗೂ ಕಾಣದೆ ಇದ್ದ ಕಾಡುವಾಸಿಗಳ ಬದುಕೂ ಕೂಡ ನಮ್ಮ ಸಂಸ್ಕೃತಿ, ಕೆಳವರ್ಗದವರ ಬದುಕು ಕೂಡ ನಮ್ಮ ಸಂಸ್ಕೃತಿಯ ಭಾಗ ಎಂದು ಸಾಹಿತ್ಯಿಕ ರೂಪದಲ್ಲಿ ದಾಖಲಿಸಿದ ಕಾಲ. ಅದರಲ್ಲೂ ಕಥಾ ಸಾಹಿತ್ಯವಂತೂ ಅತಿ ಪರಿಣಾಮಕಾರಿಯಾಗಿ, ಸೂಕ್ಷ್ಮವಾಗಿ, ಪ್ರತಿಭಟನೆಯಾಗಿ ನವೋದಯ, ನವ್ಯ, ಪ್ರಗತೀಶೀಲ ದಲಿತ- ಬಂಡಾಯ ಪಂಥದ ಲೇಖಕರು ಬರೆದರು. ಕಥಾ ಸಾಹಿತ್ಯದ ಮೆಲೆ ಪಾಶ್ಚಾತ್ಯ ಪ್ರಭಾವ ಆರಂಭ ಕಾಲದಲ್ಲಿ ಆದರೂ ಸಹ ಸ್ವಂತಿಕೆಯಿಂದ ಸಣ್ಣ ಕಥೆಗಳನ್ನು ಬರೆದೆರೆನ್ನಬಹುದು. ಆದರೆ ಕಥೆಗಳ ಉದ್ದೇಶ ಬದಲಾದದ್ದು ಈ ಹಂತದಲ್ಲಿಯೇ. ಅಲ್ಲಿಯವರೆಗೂ ಕೇವಲ ಮನರಂಜನೆಗಾಗಿ ಇದ್ದ ಕಥೆಗಳು ಒಂದು ಚಿಂತನೆಗೆ ಒಳಪಟ್ಟವು. ಅನೇಕ ಲೇಖಕರು ಜೀವನ ಏನೆಂದು ಬರೆದರೆ, ಕೆಲವರು ಜೀವನಾನುಭವಗಳನ್ನೇ ಕಥೆಯಾಗಿಸಿದರು. ಅಸ್ವಸ್ಥ ಸಮಾಜದ ಪ್ರತಿರೂಪವೇ ಕಥೆಯಾದವು. ನಿಜ ಜೀವನದಲ್ಲಾಗದ ಕೇವಲ ಮಾತಾಗಿರುವ ಆದರ್ಶಗಳೇ ಕಥೆಯಾದವು. ಸಂಸ್ಕೃತಿಯ ಪ್ರತಿಬಿಂಬವಾದ ದಾಂಪತ್ಯದ ಎರಡು-ತೊಡರುಗಳೇ ಕಥೆಯಾದವು. ಈ ರೀತಿಯ ಕಥೆಗಳು ಸಾಹಿತ್ಯಕ ಭಾಗವಾಗಿ ಸಮಾಜದ ಕನ್ನಡಿಯಾಗಿ ಪ್ರಸ್ತುತ ಕಾಲಮಾನದ ಜೊತೆ, ಅಧ್ಯಯನ ನಡೆಸುವ ಉದ್ಧೇಶ ಉತ್ತಮವೆನಿಸುತ್ತದೆ.

ಈ ನಿಟ್ಟಿನಲ್ಲಿ ಇಂತಹ ಕಥೆಗಳನ್ನು ಪರಿಚಯಿಸುವ ಉದ್ದೇಶವನ್ನು ಹೊಂದಿ ನಾನು ಎಂ.ಜಿ.ದೇಶಪಾಂಡೆಯವರ ಕಥಾ ಸಾಹಿತ್ಯ ಎನ್ನುವ ವಿಷಯವನ್ನು ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ನನ್ನ ಅಧ್ಯಯನದ ಕಥೆಗಾರರ ಜೀವನ ಮತ್ತು ಸಾಧನೆ, ಅವರ ಕಥಾಸಂಕಲನಗಳನ್ನು ಆಳವಾದ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಅವರ ಕಥೆಯಲ್ಲಿ ಮೂಡಿಬಂದ ವಸ್ತು ವಿವೇಚನೆಗಳು, ಹೀಗಿವೆ, 'ಗ್ರಾಮೀಣ ಹಾಗೂ ಕೌಟುಂಬಿಕ ಬದುಕು ಇದರಲ್ಲಿ ಗ್ರಾಮ್ಯ ಜೀವನದ ಮತ್ತು ಕುಟುಂಬದ

ಸಂಪೂರ್ಣ ಚಿತ್ರಣವನ್ನು ನೀಡುವ ಪ್ರಯತ್ನ ಮಾಡಿದ್ದಾರೆ. ಅಲ್ಲಿನ ಸಮಸ್ಯೆಯನ್ನು ಎತ್ತಿ ತೋರಿಸಿದ್ದಾರೆ. 'ದಲಿತ ಮತ್ತು ಬಡವರ್ಗದ ಶೋಷಣೆ' ಇಲ್ಲಿ ಕೆಳವರ್ಗದ ಜಲ್ವಂತರ ಸಮಸ್ಯೆಯನ್ನು ನಮ್ಮ ಮುಂದೆ ಇಡುವ ಪ್ರಯತ್ನ ಮಾಡಿದ್ದಾರೆ. ಅದರಲ್ಲಿ ಮುಖ್ಯವಾಗಿ ಶೋಷಣೆ, ಬಂಡಾಯ, ಮೂಕವೇದನೆ ಅಂಶಗಳನ್ನು ಚಿತ್ರಿಸಿದ್ದಾರೆ. 'ಸ್ತ್ರೀ ಸಂವೇದನೆ' ಈ ವಸ್ತು ವಿವೇಚನೆಯಲ್ಲಿ ಸ್ತ್ರೀಯ ಮೇಲಿನ ಅನ್ಯಾಯ, ಅತ್ಯಾಚಾರ, ಆಕೆಯ ಆತ್ಮಗೌರವ, ಸ್ವಾಭಿಮಾನ, ಆತ್ಮಾಭಿಮಾನ. ಮುಂತಾದ ಅಂಶಗಳನ್ನು ಅಭಿವ್ಯಕ್ತಪಡಿಸಿದ್ದಾರೆ. ಅದರಲ್ಲಿರುವ ಲೋಪದೋಷಗಳನ್ನು ಸಹ ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ. 'ಮಾನವೀಯ ಸಂವೇದನೆ' ಯಲ್ಲಿ ಮಾನವನ ಒನ್ನೆಲೆಯನ್ನು ಅರ್ಥೈಸಿಕೊಳ್ಳುವ ಅಂಶವನ್ನು ತಮ್ಮ ಕಥೆಯಲ್ಲಿ ಚಿತ್ರಿಸಿದ್ದಾರೆ 'ಸಾಮ್ಯಾನ ವಿಷಯಗಳು' ಈ ಮೇಲಿನ ವಸ್ತು ವಿವೇಚನೆಯಲ್ಲಿ ಬರುವ ಕಥೆಗಳನ್ನು ಬಿಟ್ಟು ಉಳಿದ ಕಥೆಗಳು / ಅಂಶಗಳು ಈ ವಸ್ತು ವಿವೇಚನೆಯಲ್ಲಿ ಸೇರಿಕೊಳ್ಳುತ್ತವೆ.

ಕಥೆಗಾರರು ತಮ್ಮ ಕಥೆಯಲ್ಲಿ ವಾಸ್ತವತೆಯನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಿದ್ದಾರೆ. ಕಥೆಗಳು ಕಾಲ್ಪನಿಕವಾದರೂ ಕೂಡ ಅದರಲ್ಲಿ ಸಮಾಜದ ಮಾರ್ಮಿಕವಾದ ಸತ್ಯ ಅಡಗಿದ್ದು, ಆ ಸತ್ಯವನ್ನು ಸಮಾಜಕ್ಕೆ ತೋರಿಸುವ ಉದ್ದೇಶ ನನ್ನದಾಗಿದೆ. ಪ್ರತಿಯೊಂದು ಪ್ರಾಂತ್ಯವು ತನ್ನದೆಯಾದ ಭಾಷಾ ಶೈಲಿಯನ್ನು ಹೊಂದಿರುತ್ತದೆ. ಅದೇ ರೀತಿಯಾಗಿ ಬೀದರ ಜಿಲ್ಲೆಯು ಕೂಡ ತನ್ನದೇಯಾದ ಭಾಷಾಶೈಲಿಯನ್ನು ಒಳಗೊಂಡಿದೆ 'ಎಂ. ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯ' ಬೀದರ ಜಿಲ್ಲೆಯ ಆಡುಭಾಷೆಯನ್ನೇ ತಮ್ಮ ಕಥೆಯಲ್ಲಿ ಬಳಸಿದ್ದಾರೆ. ತಮ್ಮ ದೇಶೀಯ ಭಾಷೆಯನ್ನು ಉಪಯೋಗಿಸಿದ್ದಾರೆ. ಈ ನೆಲದ ಸೊಗಡನ್ನು ಭಾಷೆಯ ಮೂಲಕ ತಮ್ಮ ಕಥೆಯಲ್ಲಿ ಹಿಡಿದಿಡುವ ಪ್ರಯತ್ನವನ್ನು ಮಾಡಿದ್ದಾರೆ.

ಇಲ್ಲಿ ಬಳಸಿರುವ ಆಡುನುಡಿ, ಗಾದೆಮಾತು ದ್ವಿರುಕ್ತಿ ಪದಗಳು, ಪ್ರತಿಧ್ವನಿ ಶಬ್ಧಗಳು. ಇವುಗಳು ಇವರ ಭಾಷೆಯಲ್ಲಿ ಕಂಡುಕೊಂಡ ಅಂಶಗಳಾಗಿವೆ. ಈ ಮೇಲಿನ ಅಂಶಗಳು ನನ್ನ ಅಧ್ಯಯನದ ವ್ಯಾಪ್ತಿಗೆ ಹಾಕಿಕೊಂಡಿದ್ದೇನೆ.

## ➢ <u>ಅಧ್ಯಯನದ ವಿಧಾನ :-</u>

ಎಂ. ಜಿ. ದೇಶಪಾಂಡೆಯವರ ಸೃಜನಶೀಲ ಹಾಗೂ ಸಂವೇದನಾಶೀಲ ವ್ಯಕ್ತಿತ್ವವುಳ್ಳ ಇವರು ತಮ್ಮ ಬರಹಗಳಲ್ಲಿ ಬೀದರ ಜಿಲ್ಲೆಯ ಹಳ್ಳಿಗಳ ದೃಶ್ಯ ನಿರೂಪಣೆ ಮಾಡಿರುವುದು, ಇವರ ಕಥೆಗಳು ಗಟ್ಟಿಯಾಗಿ ನಿಲ್ಲುತ್ತವೆ.

ಇವರ ಕಥೆಗಳ ಮೇಲೆ ತ.ರಾ.ಸು ಅವರ ಗಾಢವಾದ ಪ್ರಭಾವವಿದ್ದಂತೆ ಕಂಡುಬರುತ್ತದೆ. ಇದನ್ನು ಅವರನ್ನು ಸಂದರ್ಶಿಸಿದಾಗ ಸ್ವತಃ ಅವರೆ ಒಪ್ಪಿಕೊಂಡ ಮಾತಿದು. ಇವರ ಕಥೆಗಳಲ್ಲಿ ಮಾನವೀಯತೆಯ ಸ್ಪರ್ಶವಿದೆ ಮತ್ತು ಕೌಟುಂಬಿಕ ಜೀವನದ ಚಿತ್ರಣವಿದೆ. ಜಾತಿಯಲ್ಲಿರುವುದು, ವಿಧವಾ ವಿವಾಹ, ಹೆಣ್ಣಿನಶೋಷಣೆ, ರಾಜಕೀಯ ದುರೀಣರ ಇನ್ನೊಂದು ರೂಪ, ಕೌಟುಂಬಿಕದ

ಪರಿಣಾಮಕಾರಿಯಾಗಿ ಮೂಡಿರುವುದು, ಮೊದಲಾದ ಅಂಶಗಳು ಇವರ ಕಥೆಗಳಲ್ಲಿ ಅಡಗಿರುವುದು ಇವರ ಸಂದರ್ಶನದಿಂದ ಕಂಡುಬರುತ್ತದೆ. ಒಟ್ಟಿನಲ್ಲಿ ಬೀದರ ಜಿಲ್ಲೆಯ ಮಣ್ಣಿನ ವಾಸನೆ ಇವರ ಕಥೆಗಳಲ್ಲಿದೆ.

ಇಷ್ಟೇ ಅಲ್ಲದೆ 'ಎಂ. ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯದ' ಅಧ್ಯಯನಕ್ಕೆ ಸಂಬಂಧಪಟ್ಟಂತೆ ಶೋಧನಾ ವಿದ್ಯಾರ್ಥಿನಿಯಾದ ನಾನು ನೇರವಾಗಿ ಇವರನ್ನು ಸಂದರ್ಶಿಸಿ ಅವರಿಂದ ನನ್ನ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಕಥಾ ಸಂಕಲನಗಳಾದ ಭ್ರಮೆ, ಪಾರಿಜಾತ, ಶ್ರಾವಣಿ, ದೇವಯಾನಿ, ಹೂ ಬಿಡದ ಗುಲಾಬಿ ಗಿಡ, ಹಾಗೂ "ಸಾಹಿತ್ಯ ಮಂದಾರ" ಸಂಪಾದಕರು ಹಂಶಕವಿ (ಎಂ. ಜಿ. ದೇಶಪಾಂಡೆಯವರ ಅಭಿನಂದನಾ ಗ್ರಂಥ ) ಪಡೆಯಲಾಯಿತು.

ನನ್ನ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪತ್ರಿಕೆಗಳನ್ನು (ಕರ್ಮವೀರ – ಜನೆವರಿ ೧೨,೨೦೧೪ ವಿಜಯ–ಕರ್ನಾಟಕ) ಬಳಸಿಕೊಳ್ಳಲಾಯಿತು. ಅದಲ್ಲದೆ ಎಂ.ಫಿಲ್ ಸಂಪ್ರಬಂಧ ಪಾರ್ವತಿಯವರು ಬರೆದ "ಶ್ರೀಕಾಂತ ಪಾಟೀಲ ಹಾಗೂ ಅವರ ಸಮಕಾಲೀನ ಕಥೆಗಾರರು (ಗು.ವಿ.ಗು) ಇದರ ಸಹಾಯ ಪಡೆಯಲಾಯಿತು. ಪಿ.ಎಚ್.ಡಿ ಮಹಾಪ್ರಬಂಧಗಳನ್ನು ಸಹ ಗ್ರಂಥಾಲಯದಿಂದ ಪಡೆದು ನನ್ನ ಅಧ್ಯಯನ ಕಾರ್ಯ ಕೈಗೊಳ್ಳಲಾಯಿತು. ಇತರ ಸಾಹಿತಿಗಳು ಬರೆದ ಕೆಲವು ಲೇಖನಗಳು ಸಹ ನನ್ನ ಅಧ್ಯಯನಕ್ಕೆ ಫಲಕಾರಿಯಾದವು. ಹೀಗೆ ಮುಂತಾದ ಮೂಲಗಳಿಂದ ಮಾಹಿತಿಗಳನ್ನು ಸಂಗ್ರಹಿಸಿ ನನ್ನ ಅಧ್ಯಯನ ಕಾರ್ಯ ಕೈಗೊಂಡಿರುವೆನು.

ಮೇಲಿನ ಎಲ್ಲಾ ಮೂಲಗಳಿಂದ ಮಾಹಿತಿಗಳನ್ನು ಸಂಗ್ರಹಿಸುವುದಷ್ಟೇ ಅಲ್ಲದೇ ಅದರ ಜೊತೆಗೆ ಸಂಗ್ರಹಿಸಿದ ಮಾಹಿತಿಗಳನ್ನು ವಿಶ್ಲೇಷಣೆ ಮಾಡಲಾಯಿತು. ಒಟ್ಟಿನಲ್ಲಿ ಕ್ರಮಾನುಗತವಾಗಿ ವಿಶ್ಲೇಷಣೆ–ವಿವರಣೆಯನ್ನು ನನ್ನ ಅಧ್ಯಯನದಲ್ಲಿ ಮಾಡಿರುವೆನು.

- **ಅಧ್ಯಯನದ ಊಹೆಗಳು:–**

ಕರ್ನಾಟಕ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಲ್ಲಿ ಎಂ.ಫಿಲ್ ವಿದ್ಯಾರ್ಥಿನಿಯಾಗಿ ಅಭ್ಯಾಸ ಮಾಡುವ ನನಗೆ ಬೀದರ ಜಿಲ್ಲೆಯ ಹಿರಿಯ ಸಾಹಿತಿಗಳಾದ ಮತ್ತು ಗಡಿಭಾಗದಲ್ಲಿ ಸದಾಕಾಲ ಕನ್ನಡವನ್ನು ಉಳಿಸಿ–ಬೆಳೆಸುವುದಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು, ಯಾವಾಗಲೂ ಕನ್ನಡ ಚಟುವಟಿಕೆಗಳಲ್ಲಿ, ಕಾರ್ಯಕಲಾಪಗಳಲ್ಲಿ ಭಾಗಿಯಾಗುವ ಹೆಸರಾಂತ ಸಾಹಿತಿ ಎಂ. ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯದ ಬಗ್ಗೆ ಅಧ್ಯಯನ ಕೈಗೊಳ್ಳುವುದು ಸೂಕ್ತ ಎಂದೆನಿಸಿತು. ಎಂ. ಜಿ. ದೇಶಪಾಂಡೆ ಒಬ್ಬ ವ್ಯಕ್ತಿ ಅಲ್ಲ ಶಕ್ತಿ. ಅಷ್ಟೇ ಅಲ್ಲ ಸಾಹಿತ್ಯ ಚಿಂತಕ ಎಂಬುದಕ್ಕೆ ಕವನ ... ಮಾಧುರ್ಯ ಕವಿತೆ ಭಕ್ತಿಗೀತೆ, ವಚನ ಚಿತ್ರ ಕಾವ್ಯಗಳಂತಹ ಕಾವ್ಯದ ರೂಪಗಳನ್ನು ಹೆಣೆಯುತ್ತಾ ... ಸಂವೇದನೆ ಕಾವ್ಯಕ್ಕೆ ನೀಡಿದ್ದಾರೆ. ಚಿಂತನ, ಕಥೆ, ಕಾದಂಬರಿ, ಅನುವಾದ, ಚರಿತ್ರೆಯನ್ನು ಸಹ ಕಟ್ಟಿಕೊಟ್ಟಿದ್ದಾರೆ. ಬಹುಮುಖಿ ನೆಲೆಗಳ ಸಂಸ್ಕೃತಿ ವಿಚಾರಧಾರೆಗಳನ್ನು ಸಾಹಿತ್ಯದ ಹಲವು ಪ್ರಕಾರಗಳಲ್ಲಿ ರಚಿಸಿ ಬೀದರ ಜಿಲ್ಲೆಯ ಹಿರಿಯ ಸಾಹಿತಿ ಹಾಗೂ ಮಾನವತಾವಾದಿಯಾಗಿ

ಎಲ್ಲರೊಂದಿಗೆ ಬೆರೆತಿದ್ದಾರೆ. ಸಾಹಿತ್ಯಕ್ಕಿಂತ ಅವರ ಗುಣ, ಪ್ರೀತಿ, ಸೌಜನ್ಯತೆ–ಇವರತೆ ಸಾಹಿತ್ಯಕ್ಕೂ, ಬದುಕಿಗೂ ಮಾದರಿಯಾಗಿವೆ.

ಜಿಲ್ಲೆಯ ಪ್ರಮುಖ ಲೇಖಕರ ಪಟ್ಟಿಯಲ್ಲಿ ಇವರೂ ಒಬ್ಬರು. ನಮ್ಮ ಸಾಹಿತ್ಯಿಕ, ಸಾಮಾಜಿಕ ರಾಜಕೀಯ ಚಿಂತನೆಗಳಿಗೆ ಭಿನ್ನ ದೃಷ್ಟಿಕೋನವನೊದಗಿಸುವ ಸಾಮರ್ಥ್ಯವನ್ನು ಇವರ ಕಥೆಗಳು ಹೊಂದಿವೆ. ತಾನು ಕಂಡುಂಡ ಜೀವನಾನುಭವಗಳನ್ನೇ ಕಥೆಯನ್ನಾಗಿಸುವ ಕಲೆಗಾರಿಕೆ ದೇಶಪಾಂಡೆಯವರಲ್ಲಿ ಇರುವದರಿಂದ ಕಂಡಂಥ ಘಟನೆಯನ್ನೇ ಕಥೆಯಾಗಿಸಿದ್ದಾರೆ. ಜೀವನವನ್ನು ಅದರ ವಾಸ್ತವದ ನೆಲೆಯಲ್ಲಿಯೇ ಅರ್ಥೈಸಿಕೊಂಡು ಅದಕ್ಕೆ ತಕ್ಕ ಭಾಷೆಯಲ್ಲಿ ಹಂಚಿಕೊಳ್ಳುವ ಮನೋಭಾವನೆಯಾಗಲಿ, ಕಲಾತ್ಮಕವಾಗಿ ಚಿತ್ರಿಸುವ ರೀತಿಯಾಗಲೀ ಅವರು ತಮ್ಮ ಕಥೆಗಳಲ್ಲಿ ಅನುಸರಿಸಿದ್ದಾರೆ. ಅವರು ಯಾವುದೇ ಒಂದು ವಾದಕ್ಕೆ ಬದ್ಧರಾಗಿ ಕಥೆಗಳನ್ನು ರಚಿಸದೇ ವಿಭಿನ್ನ ನೆಲೆಗಳಲ್ಲಿ, ವಿಭಿನ್ನ ರೀತಿಯಲ್ಲಿ ಕತೆಗಳ ರಚನೆಯನ್ನು ಕಂಡುಬರುತ್ತವೆ. ಇದಕ್ಕೆ ಅವರ ಒಂದು ಪುಟಗಳಲ್ಲಿ ಒಂದು ಕಥೆಗಳನ್ನು ರಚಿಸಿದ್ದನ್ನು ಇಲ್ಲಿ ಉದಾಹರಣೆಯಾಗಿ ನೋಡಬಹುದು. ಇಂತಹ ಬಹುಮುಖ ಪ್ರತಿಭೆಯುಳ್ಳ "ಎಂ. ಜಿ. ದೇಶಪಾಂಡೆ ಅವರ ಕಥಾ ಸಾಹಿತ್ಯ" ಎಂಬ ವಿಷಯವನ್ನು ನಮ್ಮ ಮಾರ್ಗದರ್ಶಕರ ಮುಂದಿಟ್ಟಾಗ ಇದಕ್ಕೆ ನಮ್ಮ ಸಂಶೋಧನಾ ಅಧ್ಯಯನ ಕೇಂದ್ರದ ನಿರ್ದೇಶಕರು ಸಹ ಈ ವಿಷಯದ ಅಧ್ಯಯನಕ್ಕೆ ಒಪ್ಪಿಗೆ ಸೂಚಿಸಿದ್ದಾರೆ.

# ಅಧ್ಯಾಯ ೨.

## * ಆಯಾ ಘಟ್ಟಗಳ ಹಿನ್ನೆಲೆಯಲ್ಲಿ ಸಣ್ಣಕತೆ *

'ಹೊಸಗನ್ನಡ' ಸಾಹಿತ್ಯ ಪ್ರಕಾರದಲ್ಲಿ ಸಮೃದ್ಧವಾಗಿ ಬೆಳೆದು ಬಂದ ಪ್ರಕಾರಗಳಲ್ಲಿ ಸಣ್ಣಕತೆಯೂ ಒಂದು. ಅದು ರೂಪದಲ್ಲಿ ಚಿಕ್ಕದ್ದು, ಪರಿಮಿತ, ಧೀರ್ಘ ಕತೆಯ ಗದ್ಯ ನಿರೂಪಣೆಯ ಲಕ್ಷಣವನ್ನು ಹೊಂದಿದೆ. ಈಜಿಪ್ತ ಭಾಷೆಯ ಕ್ರಿಪೂ ೩.೨೦೦ ರ ಸುಮಾರಿನ **The two brothers** ಎಂಬುದೇ ಪ್ರಾಚೀನ ಕತೆ. ಜಾತಕ ಕತೆಗಳು, ಪಂಚತಂತ್ರ, ಈಸೋಪನ, ನೀತಿಕತೆಗಳು, ಅರೇಬೀಯನ ನೈಟ್ಸ. ಹೀಗೆ ಪ್ರಾಚೀನ ಕತೆಗಳ ಪಟ್ಟಿ ಕೊಡಬಹುದಾದರೂ ಆಧುನಿಕ ಸಾಹಿತ್ಯದಲ್ಲಿ ಸಿಕ್ಕ ಸ್ಥಾನಮಾನಗಳೇ ಬೇರೆ. ಹಿಂದೆ ಬಂದ ಕತೆಗಳು ಯಾವುದಾದರೊಂದು ಪ್ರಸಿದ್ಧ ಮೂಲದಿಂದ ಬಂದವುಗಳಾಗಿದ್ದವು. ೧೯ನೇ ಶತಮಾನದಲ್ಲಿ ವೃತ್ತ ಪತ್ರಿಕೆಗಳ ಮಾಧ್ಯಮದಿಂದ ಸಣ್ಣಕತೆಗಳ ಪ್ರಚಾರಕ್ಕೆ ಹೆಚ್ಚು ಒತ್ತು ದೊರೆತು, ಹೊಸ ಸ್ವತಂತ್ರ ಕತೆಗಳ ರಚನೆಗೆ ಪ್ರೇರಣೆ ದೊರೆಯಿತು"[೧].

'ಸಂಕ್ಷಿಪ್ತ ಗದ್ಯ ನಿರೂಪಣೆ' ಎನಿಸಿಕೊಂಡ ಸಣ್ಣಕತೆಗಳು ಒಂದು ಅಥವಾ ಅರ್ಧ ಗಂಟೆಯಲ್ಲಿ ಓದಿ ಮುಗಿಸುವಂತಹದ್ದು. ಯಾವುದಾದರೂ ಘಟನೆ, ಪಾತ್ರ ಅಥವಾ ಭಾವನೆಯನ್ನು ಕೇಂದ್ರವಾಗಿಸಿಕೊಂಡು ರಚಿಸುವ ಸಣ್ಣಕತೆಗಳಲ್ಲಿ ಪರಿಣಾಮ ಮುಖ್ಯ.

### ➢ ನವೋದಯ ಘಟ್ಟ :-

ನವೋದಯ ಸಾಹಿತ್ಯದ ಪೂರ್ವದಲ್ಲಿ ಅಂದರೆ ಕ್ರಿ.ಶ.೧೯೦೦ರಲ್ಲಿ ಪ್ರಥಮ ಬಾರಿಗೆ 'ಸುವಾಸಿನಿ' ಎಂಬ ಮಾಸ ಪತ್ರಿಕೆಯಲ್ಲಿ ಪಂಜೆ ಮಂಗೇಶರಾಯರು "ನನ್ನ ಚಿಕ್ಕ ತಾಯಿ" "ನನ್ನ ಚಿಕ್ಕ ತಂದೆ" ಎಂಬ ಎರಡು ಕಥೆಗಳನ್ನು ಪ್ರಕಟಿಸಿದರು. ಈ ಕಾಲದಲ್ಲಿ ಕಥೆಗಳನ್ನು ಬರೆದವರಲ್ಲಿ ಕೇರೂರು ವಾಸುದೇವಾಚಾರ್ಯರು ಹಾಗೂ ಎಂ. ಎನ್.ಕಾಮತ ಪ್ರಮುಖರು.

ನಂತರ ಸಣ್ಣಕತೆಯ ರೂಪಕ್ಕೆ ಒಂದು ಸ್ವರೂಪ ತಂದುಕೊಟ್ಟು ಅದನ್ನು ಗಂಭೀರವಾದ ಚಿಂತನೆಯ ಮಾಧ್ಯಮವನ್ನಾಗಿ ಮಾಡಿ ಅದಕ್ಕೆ ಹದವನ್ನು ತುಂಬುವ, ಭಾಷೆಯನ್ನು ಬೆಳೆಸಿ ಕಥೆಗಳನ್ನು ಬೆಳೆಸಿದ ಕೀರ್ತಿ ಶ್ರೀನಿವಾಸರಿಗೆ ಸಲ್ಲುತ್ತದೆ. ಅವರ ಮೊದಲ ಕಥೆಗಳಾದ " ರಂಗಪ್ಪನ ಮದುವೆ" ಮತ್ತು "ರಂಗಪ್ಪನ ದೀಪಾವಳಿ" ಎಂಬ ಕಥೆಗಳು ಪ್ರಕಟವಾದವು. ಸಣ್ಣಕತೆಗಳು ಎಂಬ ಸಂಕಲನದಲ್ಲಿ ಈ ಕಥೆಗಳು ಪ್ರಕಟವಾದವು. "ವೆಂಕಟಸ್ವಾಮಿಯ ಪ್ರಣಯ" " ಮೊಸರಿನ ಮಂಗಮ್ಮ" "ವಸುಮತಿ" ಮುಂತಾದ ಇವರ ಕಥೆಗಳಲ್ಲಿ ಐತಿಹಾಸಿಕ ಪ್ರಜ್ಞೆ, ಸಾಮಾಜಿಕ ಪ್ರಜ್ಞೆ, ಮಾನವೀಯ ಮೌಲ್ಯಗಳನ್ನು ಕಾಣಬಹುದು. ಹಿರಿಮೆಯ ಶಿಖರವನ್ನು ಚಿತ್ರಿಸಿರುವ ಮಾಸ್ತಿಯವರು ವಿಡಂಬನೆ ರಹಿತ ಸವಿಯಾದ ಹಾಸ್ಯವನ್ನು ಸಣ್ಣಕತೆಗಳಲ್ಲಿ ತಂದರು.

---

೧. ಐಚ್ಛಿಕ ಕನ್ನಡ ಪತ್ರಿಕೆ-೧ (ಐ.ಎ.ಎಸ್.ಕೆ.ಎ.ಎಸ್.) ಸಂಪಾದಕರು ಪ್ರೊ ಶಿವರಾಮಯ್ಯ ಪುಟ ಸಂಖ್ಯೆ ೨೧೯

ಕುವೆಂಪು ಅವರ 'ಧನ್ವಂತರಿ ಚಿಕಿತ್ಸೆ'ಯಂತಹ ಕಥೆಯಲ್ಲಿ ಬಡತನದ ಬೇಗೆಯಲ್ಲಿನ ಅನುಭವಗಳನ್ನು, ಆದರ್ಶವಾದವನ್ನು ಕಾಣಬಹುದು.

'ಆನಂದ ಕಂದ' ಬೇಂದ್ರೆ, ನರಸಿಂಹಶಾಸ್ತ್ರಿ ಮುಂತಾದವರು ಈ ಕಾಲದಲ್ಲಿ ಸಣ್ಣಕತೆಗಳ ರಚನೆಯಲ್ಲಿ ತೊಡಗಿದ್ದು ಕಂಡುಬರುತ್ತದೆ. ಇವರಲ್ಲಿ ಮಾಸ್ತಿಯವರ ಹಾಗೆ ಕಥೆಗಳನ್ನು ಬರೆದಿದ್ದು ಕಡಿಮೆ ಎಂದು ಕಾಣುತ್ತವೆ.ಆದರೂ "ಆನಂದ" ಎಂಬ ಕಾವ್ಯನಾಮದಿಂದ ಎಂ. ಸೀತಾರಾಮ ಅವರು ಬರೆದ ಕಥೆಗಳು ಗಮನಾರ್ಹವಾಗಿವೆ. ಆದರೆ ಶ್ರೀನಿವಾಸರ ಕಥೆಗಳಂತೆ ಜೀವನ ವೈಶಾಲತೆಯನ್ನು ಕಾಣಬಹುದು. ಇವರು ಬರೆದ "ನಾ ಕೊಂದ ಹುಡುಗಿ" " ಚೊಚ್ಚಲ ಸಂಭ್ರಮ" ಮುಂತಾದ ಕಥೆಗಳು ಜನಪ್ರಿಯವಾಗಿವೆ. ಈ ಸಂದರ್ಭದಲ್ಲಿ ಕೊಡಗಿನ ಗೌರಮ್ಮ, ರಮಾನಂದ ಪಡುಕೋಣೆ ಮುಂತಾದವರು ಕಥೆಗಳ ರಚನೆಯಲ್ಲಿ ತೊಡಗಿ ಕನ್ನಡ ಕಥಾ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು.

## ➢ ಪ್ರಗತಿಶೀಲ ಘಟ್ಟ:-

ಕನ್ನಡದಲ್ಲಿ ಪ್ರಗತಿಶೀಲತೆಯ ಆಂದೋಲನವಾದದ್ದು ಸಣ್ಣಕತೆಗಳಿಂದ. ಈ ಸಂದರ್ಭದಲ್ಲಿ ಅನುವಾದ, ಕಾವ್ಯ, ನಾಟಕ ಪ್ರಕಾರಗಳು ಸಾಹಿತ್ಯದಿಂದ ದೂರವಾಗಿ ಕಥೆ-ಕಾದಂಬರಿಗಳು ಗಣನೀಯ ಸಂಖ್ಯೆಯಲ್ಲಿ ಮೈದೋರಿ " ಕಲೆಗಾಗಿ ಕಲೆಯಲ್ಲ" "ಬದುಕಿಗಾಗಿ ಕಲೆ" ಎನ್ನುವ ಹೊಸ ಧ್ವನಿ ಹುಟ್ಟಿತ್ತು.

ಪ್ರಗತಿ ಶೀಲ ಚಳುವಳಿಯ ಮುಂಚೂಣಿಯಲ್ಲಿ ಅ.ನ.ಕೃ, ತ.ರಾ.ಸು, ನಿರಂಜನ, ಕಟ್ಟಿಮನಿ, ಅರ್ಚಕ ವೆಂಕಟೇಶ ಮುಂತಾದವರನ್ನು ಹೆಸರಿಸಬಹುದು.

ಈ ಸಂದರ್ಭದ ಕನ್ನಡ ಕಥೆಗಾರರ ಬಳಗವು ಸಾಂಪ್ರದಾಯಿಕ ಸಾಹಿತ್ಯವನ್ನು ಮತ್ತು ಜಿಡ್ಡುಗಟ್ಟಿದ ವ್ಯವಸ್ಥೆಯನ್ನು ತೀವ್ರವಾಗಿ ವಿಮರ್ಶಿಸಿದರು. ಜನಸಾಮಾನ್ಯರ ಆಶೋತ್ತರಗಳಿಗೆ ಮುಖವಾಣಿಯಾಗಿ ಸಾಹಿತ್ಯ ಬರೆಯಬೇಕೆಂಬ ಮನೋಧರ್ಮ ಈ ಕಥೆಗಾರರದಾಗಿತ್ತು.

ಈ ಎಲ್ಲಾ ವಿಚಾರಗಳಿಂದ ಕಥಾ ಸಾಹಿತ್ಯಕ್ಕೆ ಒಂದು ಹೊಸ ಆಯಾಮ ಬಂತು. ತಂತ್ರ, ವಸ್ತು ವೈವಿಧ್ಯತೆಯ ದೃಷ್ಟಿಯಿಂದಲೂ ಗಮನಾರ್ಹ ಸಾಧನೆ ಈ ಯುಗದಲ್ಲಿ ನಡೆಯಿತು.

ಈ ಹಿನ್ನೆಲೆಯಲ್ಲಿ ತ.ರಾ.ಸು. ಅವರು 0-0=0 ಕಥೆ ಹಾಗೇ 'ಗಿರಿಯ – ಮಲ್ಲಿಗೆ' ಎಂಬಂತಹ ಕಥೆಗಳು ರಸವತ್ತಾದ ಶೈಲಿಯಿಂದ ಕನ್ನಡದ ರಂಜನೀಯ ಕತೆಗಳು. ಅ.ನ.ಕೃ ಅವರ 'ಅಗ್ನಿಕನ್ಯೆ' 'ಕಾಮನ ಬಿಲ್ಲುಗಳು' ಕಥಾ ಸಾಹಿತ್ಯದ ಅಪೂರ್ವ ಸಂಕಲನಗಳಾಗಿವೆ.

ಬಸವರಾಜ ಕಟ್ಟಿಮನಿಯವರ 'ಗಿರಿಜಾ ಕಂಡ ಸಿನಿಮಾ' ಒಂದು ಪ್ರಸಿದ್ಧ ಕಥೆಯಾಗಿದೆ. ಈ ಕಥೆಯು ತಂತ್ರದ ದೃಷ್ಟಿಯಿಂದಲೂ ಗಮನಾರ್ಹ ಕಥೆಯಾಗಿದೆ. ಈ ಹಿನ್ನೆಲೆಯಲ್ಲಿ ನಿರಂಜನರ 'ಕೊನೆಯ ಗಿರಾಕಿ' ಕಥೆ ಕೂಡ ತುಂಬಾ ಪ್ರಸಿದ್ಧವಾದ ಕಥೆಯಾಗಿದೆ.

ಇವರಲ್ಲದೇ ಈ ಘಟ್ಟದಲ್ಲಿ ಕೆಲವು ಮಹಿಳಾ ಕಥೆಗಾರ್ತಿಯರು ಪ್ರಗತೀಶೀಲ ದೃಷ್ಟಿಯನ್ನಿಟ್ಟುಕೊಂಡು ಬರೆದರು. ಅವರಲ್ಲಿ ವಾಣಿ, ವೀಣಾ ಶಾಂತೇಶ್ವರ ಮುಂತಾದವರನ್ನು ಹೆಸರಿಸಬಹುದು.

ಕಥೆಗಳ ಮೂಲಕ ಸಹೃದಯದಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಸಮಾಜ ಪರಿವರ್ತನೆಗೆ ಕಾರಣವಾಗುವಲ್ಲಿ ಪ್ರಗತಿಶೀಲ ಚಳುವಳಿ ಪ್ರಮುಖ ಪಾತ್ರವಹಿಸಿತು.

## ➢ ನವ್ಯ ಘಟ್ಟ:-

ನವ್ಯ ಸಾಹಿತ್ಯದಲ್ಲಿ ಕಥಾ ಸಾಹಿತ್ಯದ ಪ್ರವರ್ತಕ ಕೆ.ಸದಾಶಿವ ಅವರು ಗಮನಾರ್ಹ ಕತೆಗಳನ್ನು ಕಥಾಸಾಹಿತ್ಯಕ್ಕೆ ನೀಡಿದ ಕೊಡುಗೆ ಗಮನಾರ್ಹವಾಗಿದೆ. “ನಲ್ಲಿಯಲ್ಲಿ ನೀರು ಬಂದಿತು” ಎಂಬುವುದು ಇವರ ಪ್ರಸಿದ್ಧ ಕಥೆ. ರಾಮಚಂದ್ರ ಶರ್ಮರ “ ಸೆರಗಿನ ಕೆಂಡ” “ಮಂದಾರ ಕುಸುಮ” “ಎಳೆಯ ಜೀವ”, ಗಂಗಾಧರ ಚಿತ್ತಾಲರ “ಅಬೋಲಿನ ಆಟ”, ಅನಂತ ಮೂರ್ತಿಯವರ “ಆಕಾಶ ಮತ್ತು ಚುಕ್ಕೆ” “ಸೂರ್ಯನ ಕುದುರೆ”, ಶಾಂತಿನಾಥ ದೇಸಾಯಿಯವರ ‘ಮಂಜುಗಡ್ಡೆ’, ‘ಕ್ಷಿತುಬಾದಂಡೆ’, ‘ರಾಕ್ಷಸ’ ಮುಂತಾದ ಕಥಾಸಂಕಲನಗಳು ಕಥಾಸಾಹಿತ್ಯದಲ್ಲಿ ಗಮನಾರ್ಹವಾದ ಕೃತಿಗಳು ಎನಿಸಿವೆ. ಪಿ.ಲಂಕೇಶರ ‘ಕೆರೆಯ ನೀರು ಕೆರೆಗೆ ಚೆಲ್ಲಿ’ ಈ ಕಥೆಯು ಕೂಡ ಒಂದು ವಿಶಿಷ್ಟವಾದ ಕಥೆಯಾಗಿದೆ

## ➢ ದಲಿತ ಬಂಡಾಯ:-

ನವ್ಯ ಪ್ರಕಾರವು ಆಂತರಿಕ ಗೊಂದಲಗಳ ಅವಸ್ಥೆಯ ಮಡಿಲಲ್ಲಿ ಸಂಘರ್ಷಕ್ಕೆ ಸಿಕ್ಕಿಕೊಂಡು ಒದುಗರ ಗಮನಕ್ಕೆ ಬರದೇ ಇದ್ದಾಗ ಹಾಗೂ ಜನಪರ ನಿಲುವಿಗೆ ಸಿಲಿಕಿ ಹೋದಾಗ ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಮುಂದೊಂದು ಮಾರ್ಗ ಹಿಡಿಯಬೇಕಾದುದ್ದು ಅನಿವಾರ್ಯವಾಗಿತ್ತು. ಈ ಹಿನ್ನಲೆಯಲ್ಲಿ ಹುಟ್ಟಿದ ಹೊಸ ಮಾರ್ಗವೇ ದಲಿತ ಬಂಡಾಯ ಸಾಹಿತ್ಯ.

ಈ ಸಾಹಿತ್ಯ ಸಂದರ್ಭದಲ್ಲಿ ದೇವನೂರು ಮಹಾದೇವರ ಕಥನ ಸಂಕಲನದ ಜನಪದ ನಿಲುವಿನ, ದಲಿತರ, ನೊಂದವರ, ಶೋಷಿತರ, ನಿರಾಶೆ ಅತ್ಯಂತ ಪರಿಣಾಮಕಾರಿಯಾಗಿ ಮೂಡಿದೆ.

ಕನ್ನಡ ಕಥಾ ಸಾಹಿತ್ಯ ಲೋಕಕ್ಕೆ ವಸ್ತುವಿನ್ಯಾಸ, ವೈಶಿಷ್ಟ್ಯದೊಂದಿಗೆ ಪ್ರವೇಶಿಸಿದ ಬೋಳುವಾರ, ಮಹ್ಮದ ಕುಂಞ ಮಹತ್ವದ ಕಥೆಗಾರರು. ದೇವರುಗಳ ರಾಜ್ಯದಲ್ಲಿ ‘ಅಂಕ’ ‘ಆಕಾಶಕ್ಕೆ ನೀಲಿ ಪರದೇ’ ಕಥಾಸಂಕಲನಗಳು, ಮಾನವೀಯ ಮೌಲ್ಯಗಳನ್ನು ಬಿಂಬಿಸುವ, ಸಾಮಾಜಿಕ ಪ್ರಜ್ಞೆಯ ಅರಿವನ್ನು ಮೂಡಿಸುವ ಕಥಾಸಂಕಲನಗಳಾಗಿವೆ. ಶೋಷಣೆಯ ವಿರುದ್ಧ ಧ್ವನಿ ಎತ್ತಿದ ಕಥೆಗಾರರಲ್ಲಿ ಇವರು ಪ್ರಮುಖರು. ಚನ್ನಣ್ಣ ವಾಲಿಕಾರ, ಬಸವರಾಜಸಬರದ ಮುಂತಾದ ಬರಹಗಾರರು ಈ ಸಾಹಿತ್ಯದಲ್ಲಿ ಸಾಕಷ್ಟು ಕೃಷಿ ಮಾಡಿದ್ದಾರೆ.

# ಅಧ್ಯಾಯ ೩.

## -: ಬೀದರ ಜಿಲ್ಲೆಯ ಕಥಾ ಸಾಹಿತ್ಯ ಪರಂಪರೆ :-

ಮನುಷ್ಯ ತನ್ನಲ್ಲಿರುವ ಭಾವನೆಗಳನ್ನು ಅಭಿವ್ಯಕ್ತಪಡಿಸಲು ಹಲವಾರು ಮಾರ್ಗಗಳನ್ನು ಅಳವಡಿಸಿಕೊಂಡಿದ್ದಾನೆ ಅದು ಸಾಹಿತ್ಯ ಕ್ಷೇತ್ರವಾಗಿರಬಹುದು, ವೈಜ್ಞಾನಿಕವಾಗಿರಬಹುದು. ಇವುಗಳ ಮುಖಾಂತರ ತನ್ನ ಭಾವನೆಗಳನ್ನು ವ್ಯಕ್ತ ಮಾಡುತ್ತಾನೆ. ಅದು ಪ್ರಾಯೋಗಿಕವಾಗಿರಬಹುದು, ರಚನಾತ್ಮಕವಾಗಿರಬಹುದು. ಇಂತಹ ಒಂದು ಅಭಿವ್ಯಕ್ತಿಯೇ ಸಣ್ಣಕತೆ ಸಾಹಿತ್ಯವಾಗಿದೆ.

'ಕಥೆ' ಸಂಸ್ಕೃತ ಶಬ್ದ. ಅದರ ಅರ್ಥ 'ಹೇಳು'. ಕಥೆ ಎಂದರೆ ಇನ್ನೊಬ್ಬರಿಗೆ ಹೇಳುವಂತಹ ಒಂದು ಘಟನೆ ಅಥವಾ ಘಟನಾವಳಿ. ಕಥೆಯ ಸೃಷ್ಟಿಗೆ ಮೂರು ವಸ್ತುಗಳು ಅವಶ್ಯಕ ೧) ಕಥಾ ವಸ್ತು ೨) ಕತೆಗಾರ ೩) ಕೇಳುವವ (ಓದುವವ) ಇವಗಳಲ್ಲಿ ಒಂದೇ ಒಂದು ಇದ್ದರೂ ಕತೆಯಾಗದು. ಈ ಮೂರು ಬೇಕೆ ಬೇಕು.

ಸಣ್ಣಕತೆಯ ಉಗಮವನ್ನು ಜನಪದ ಕತೆಯಲ್ಲಿಯೇ ನಾವು ಕಾಣುತ್ತೇವೆ. ಆದರೆ ಅದಕ್ಕೆ ರೂಪರೇಷೆಯನ್ನು ನೀಡಿದ್ದು, ನವೋದಯದ ಕಾಲದಲ್ಲಿ ಕತೆಯನ್ನು ಬರೆದು ಪತ್ರಿಕೆಯಲ್ಲಿ ಪ್ರಕಟಣೆ ಮಾಡುತ್ತಿದ್ದರು. ಹೀಗೆ ಇಲ್ಲಿಂದ ಆರಂಭವಾದ ಈ ಆಧುನಿಕ ಹೊಸಗನ್ನಡ ಸಾಹಿತ್ಯ ಪ್ರಕಾರವು ಹೈದ್ರಾಬಾದ ಕರ್ನಾಟಕವನ್ನು ಪ್ರವೇಶಿಸಿದ್ದು ನವೋದಯದ ನಂತರದಲ್ಲಿ ೧೯೬೪ ರಲ್ಲಿ ಗುಲಬರ್ಗಾದಿಂದ ಹೊರಬಂದ 'ಸನ್ಮಾನ' ಎನ್ನುವ ಪ್ರಾತಿನಿಧಿಕ ಕಥಾ ಸಂಕಲನವೇ ಮೊದಲನೆಯದು. ೧೯೬೪ ರ ಹಿಂದೆ ಯಾವ ಕಥಾ ಸಂಕಲನಗಳು ಹೊರಬರಲಿಲ್ಲಾ. ಅದರಲ್ಲೂ ಬೀದರ ಜಿಲ್ಲೆಯಲ್ಲಿ ಸಣ್ಣಕತೆ ಆಗಮವಾದುದು ತುಂಬಾ ವಿರಳವೆಂದೇ ಹೇಳಬಹುದು.

ಬೀದರ ಜಿಲ್ಲೆಯಲ್ಲಿ ಮೊದಲು ಸಣ್ಣ ಕತೆಯನ್ನು ಹೊರತಂದ ಕೀರ್ತಿ ಡಾ.ಜಿ.ಬಿ.ವಿಸಾಜಿಯವರಿಗೆ ಸಲುತ್ತದೆ. ಇವರ ಮೊದಲ ಸಣ್ಣಕಥೆ 'ಅನಂತ ಸಂಗಮ' ಎಂಬ ಸಂಕಲನವನ್ನು ಹೊರತಂದಿದಾರೆ. ಆದರೆ ನಂತರದ ಡಾ.ಜಿ.ಬಿ.ವಿಸಾಜಿಯವರು ಸಣ್ಣಕಥೆ ಕ್ಷೇತ್ರದಲ್ಲಿ ಯಾವುದೇ ಒಲವು ತೋರಲಿಲ್ಲ.

೧೯೭೪ ರಲ್ಲಿ 'ಅರಳು' ೧೯೮೭ ರಲ್ಲಿ ' ಚೇತನ' ಕಥಾ ಸಂಕಲನಗಳನ್ನು ಸುಬ್ಬಣ್ಣ ಅಂಬೆಸಿಂಗೆ ಅವರು ಹೊರತಂದರು. ೧೯೮೬ ರಲ್ಲಿ 'ಭ್ರಮೆ' ಕಥಾಸಂಕಲನವನ್ನು ೧೯೯೪ ರಲ್ಲಿ 'ಪಾರಿಜಾತ' ಕಥಾಸಂಕಲನವನ್ನು ಎಂ.ಜಿ.ದೇಶಪಾಂಡೆಯವರು ಪ್ರಕಟಿಸಿದರು.

೧೯೯೦, ೧೯೯೬, ೨೦೦೯ ರಲ್ಲಿ ಕ್ರಮವಾಗಿ 'ಯಾರನ್ನು ಪ್ರೀತಿಸಬೇಡ', 'ಇದು ಎಂತಹ ಲೋಕವಯ್ಯ', 'ಕಲ್ಲಣ್ಣನ ಕಾಂಪ್ಲೆಂಟ ಪ್ರಕರಣ ಮತ್ತು ಇತರ ಕತೆಗಳು'. ಎಂಬ ಸಂಕಲನಗಳನ್ನು ಗುರುನಾಥ ಅಕ್ಕಣ್ಣನವರು ಹೊರತಂದರು.

೧೯೯೧, ೧೯೯೩ ರಲ್ಲಿ 'ಕೊಡ್ಗಲ್ಲಿನ ಕೂಗು', 'ಮಿರ್ಚಿ ಬಾಬಾ ಮತ್ತು ಇತರ ಕಥೆಗಳು' ಎಂಬ ಎರಡು ಕಥಾಸಂಕಲನಗಳನ್ನು, ಬಾಲಚಂದ್ರ ಜಯಶೆಟ್ಟಿಯವರು ಪ್ರಕಟಿಸಿದರು. ೧೯೯೩, ೨೦೦೧ ರಲ್ಲಿ 'ಅನರ್ಥ' 'ನೆರಳಿನಷ್ಟೆ ಕತ್ತಲು' ಕಥಾಸಂಕಲನಗಳನ್ನು 'ಕ್ಷಿತಿಜ ಬೀದರ' (ಬಸವರಾಜ ಮಠಪತಿ) ಹೊರತಂದರು. ೧೯೯೪ ರಲ್ಲಿ ಚಂದ್ರಕಾಂತ ಪಾಟೀಲರು 'ಪರಿವರ್ತನೆ' ಕಥಾಸಂಕಲನಗಳನ್ನು ಹೊರತಂದರು.

೧೯೯೬ ರಲ್ಲಿ 'ಬೆಂಕಿ ಮರೆಯ ತಂಪು' ಕಥಾಸಂಕಲನವನ್ನು ಶ್ರೀಕಾಂತ ಪಾಟೀಲ ಪ್ರಕಟಿಸಿದರು. ೧೯೯೭ ರಲ್ಲಿ 'ಬಿಂಬ ಪ್ರತಿಬಿಂಬ' ಕಥಾಸಂಕಲನವನ್ನು ಹಾಗೂ ಹಿಂದಿ ಭಾಷೆಯ ೧೧ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಿ ' ಪುರಸ್ಕಾರ' ಕಥಾಸಂಕಲನವನ್ನು ಬಿ.ಎಸ್.ಖೂಬಾರವರು ಹೊರತಂದರು. ೧೯೯೮ ರಲ್ಲಿ ರುಕ್ಮೋದ್ದಿನ್ ಇಸ್ಲಾಂಪೂರವರು ' ಕಾರ್ಗತ್ತಲೆಯಲ್ಲಿ ಮಂಜು ಬೆಳಕಿನೆಡೆಗೆ' ಎಂಬ ಕಥಾಸಂಕಲನವನ್ನು ಹೊರತಂದರು.

೨೦೦೦ ರಲ್ಲಿ 'ಹಣದಿ' ೨೦೦೨ ರಲ್ಲಿ 'ಏಳೂರು ಸರಪಂಚ' ೨೦೦೮ ರಲ್ಲಿ 'ಮನಸ್ಸು ಮಾತಾಡಿದಾಗ' ಎಂಬ ಮೂರು ಕಥಾಸಂಕಲನಗಳನ್ನು ಶಿವಕುಮಾರ ನಾಗವಾರವರು ಪ್ರಕಟಿಸಿದರು. ೨೦೦೪ ರಲ್ಲಿ 'ಸರಿದ ನಕ್ಷತ್ರ' ಕಥಾಸಂಕಲನವನ್ನು ಗಣಪತಿ ಭೂರೆಯವರು ಹೊರತಂದರು. ೨೦೦೬ ರಲ್ಲಿ 'ಬಾಂದವ್ಯ' ಅರುಂಧತಿ ಚಾಂದಕವಠೆ, ೨೦೦೭ ರಲ್ಲಿ 'ಮಾಸ್ತರನ ಮನೆ' ಎಂಬ ಸಂಕಲನವನ್ನು ದೇಶಾಂಶ ಹುಡುಗಿ ಪ್ರಕಟಿಸಿದ್ದಾರೆ.

೨೦೦೯ರಲ್ಲಿ ಮಚ್ಚೇಂದ್ರ ಅಣಕಲರ 'ಲಾಟರಿ' ಮೊದಲನೆ ಕಥಾಸಂಕಲನ. ೨೦೦೭ ರಲ್ಲಿ ಹಂಶಕವಿ 'ಬೀದರ ಜಿಲ್ಲೆಯ ಆಯ್ದ 'ಕಥೆಗಳು', ೨೦೦೮ ರಲ್ಲಿ 'ಕಥೆಗಳು ಕಾಯುವದಿಲ್ಲ' ಕ್ಷಿತಿಜ ಬೀದರ, ೨೦೦೯ ರಲ್ಲಿ ನಾಲ್ಕು ಕಥಾಸಂಕಲನಗಳು ಬಂದಿವೆ. ಅವು ರೆಂಟಿ, ಅಧ್ರುವ, ದರ್ಶನ ಹಾಗೂ ಪತ್ತೆದಾರಿ ಇರುವೆ (ಮಕ್ಕಳ ಕಥೆಗಳು) ಬಂದಿವೆ.

೨೦೧೦ರಲ್ಲಿ ಸುಬ್ಬಣ್ಣ ಅಂಬೆಸಿಂಗೆ ಯವರ 'ಕಾಡಿನಲ್ಲಿ ಹಿಡಿದ ಗ್ರಹಣ ಗಂಗೆಯಲ್ಲಿ ಬಿಟ್ಟಿತ್ತು' ಹೊರತಂದಿದ್ದಾರೆ. ೨೦೧೦ ರಲ್ಲಿ ಎಂ.ಜಿ. ದೇಶಪಾಂಡೆಯವರು 'ಶ್ರಾವಣಿ', 'ದೇವಯಾನಿ' ಎಂಬ ಎರಡು ಕಥಾಸಂಕಲನಗಳನ್ನು ಹೊರತಂದಿದ್ದಾರೆ. ೨೦೧೩ರಲ್ಲಿ ಎಂ.ಜಿ. ದೇಶಪಾಂಡೆಯವರು 'ಹೂ ಬಿಡದ ಗುಲಾಬಿ ಗಿಡ' ಎಂಬ ಕಥಾಸಂಕಲನಗಳನ್ನು ಹೊರತಂದಿದ್ದಾರೆ. ಇಲ್ಲಿಯವರೆಗೆ ಬೀದರ ಜಿಲ್ಲೆಯಿಂದ ೨೯ ಕಥಾಸಂಕಲನಗಳನ್ನು ೧೫ ಜನ ಕಥೆಗಾರರಿಂದ ರಚನೆಗೊಂಡಿವೆ.

ರಾಜಮಟ್ಟದ ಸಂಕಲನಗಳಲ್ಲಿ ಬೀದರ ಜಿಲ್ಲೆಯ ಕಥೆಗಾರರು ತಮ್ಮ ಸ್ಥಾನವನ್ನು ಭದ್ರಪಡಿಸಿಕೊಂಡಿರುವುದು ದೇಶ, ಕಾಲ, ಸಾಮಾಜಿಕ ಹೊಣೆಗಾರಿಕೆಯಲ್ಲಿ ಕಥಾ ಉದ್ದೇಶ ಯಶಸ್ವಿಗೊಳಿಸುತ್ತಾ ಸಾಗಿರುವುದು ಪ್ರಗತಿ ಹೆಜ್ಜೆಯಂದೇ ಹೇಳಬಹುದು.

೧೯೯೬ ರಲ್ಲಿ ಅಮರೇಶ ನೂಗಡೋಣಿ ಸಂಪಾದಿಸಿದ 'ಬಿಸಿಲ ಹನಿಗಳು' ಹೈದ್ರಬಾದ ಕರ್ನಾಟಕ ಭಾಗದ ಪ್ರಾತಿನಿಧಿಕ ಕಥಾಸಂಕಲನದಲ್ಲಿ ಬೀದರ ಜಿಲ್ಲೆಯ ಕಥೆಗಾರರ ಕಥೆಯನ್ನು ಸೇರಿಸಿದ್ದಾರೆ. 'ಚಾಳೀಸು' ಬಾಲಚಂದ್ರ ಜಯಶೆಟ್ಟಿ, 'ಹರಿದ ಕಾಗದದ ಚೂರುಗಳು' ಶಿವಕುಮಾರ ನಾಗವಾರ, 'ಮೂಡಲದಾಗ ಕೆಂಪು ರಾಶಿ ಮೂಡಿತ್ತು' ಶ್ರೀಕಾಂತ ಪಾಟೀಲ, 'ಈ ಸಂಘರ್ಷಗುಂಟೆನಯ್ಯ ಕೊನೆ?' ಗುರುನಾಥ ಅಕ್ಕಣ್ಣ. ಅದೇ ರೀತಿ ಸಿದ್ದಲಿಂಗೇಶ್ವರ ಪ್ರಕಾಶನ ಗುಲಬರ್ಗಾದವರು ಪ್ರಕಟಿಸಿದ 'ಸರಣಿ ಕಥೆಗಳು' ಸಂಪಾದಕರು ಬಾಲಚಂದ್ರ ಜಯಶೆಟ್ಟಿ. ಇವರ ಸರಣಿ ಕಥೆಯಲ್ಲಿ ಬೀದರ ಜಿಲ್ಲೆಯ ಕಥೆಗಾರರ ಕಥೆಗಳಿವೆ. ಹೈದ್ರಾಬಾದ ಕರ್ನಾಟಕದ ಕತೆಗಾರರ ಕತೆಗಳನ್ನೊಳಗೊಂಡು ಕಿರುಪರದೆಯಲ್ಲಿ. ಬಿತ್ತರವಾದ ಧಾರವಾಹಿ 'ಬಿಸಿಲ ಹನಿಗಳು', ಎಂ.ಜಿ.ದೇಶಪಾಂಡೆಯವರ 'ಚಾಂದನಿ' ಕತೆ ಹಾಗೂ ಗುರುನಾಥ ಅಕ್ಕಣ್ಣನವರ ಆಯ್ಕೆ, ಹಿರಿಯ ಸಾಹಿತಿಗಳಾದ ವೀರೆಂದ್ರ ಸಿಂಪಿಯವರ ಕತೆಗಳು ಸೇರಿರುವುದು ಹೆಮ್ಮೆಯ ಸಂಗತಿ. ೨೦೦೪ರಲ್ಲಿ ಬೀದರ ಜಿಲ್ಲಾ ಪ್ರಾತಿನಿಧಿಕ ಕಥಾ ಸಂಕಲನವನ್ನು ಹೊರತಂದಿದ್ದಾರೆ. ಇದರಲ್ಲಿಯೂ ಸಹ ಹೊಸ ಕಥೆಗಾರರನ್ನು ಗುರುತಿಸಿದ್ದು ಹೆಮ್ಮೆಯ ಸಂಗತಿ.

೨೦೦೭ ರಲ್ಲಿ ಧರಿನಾಡು ಕನ್ನಡ ಸಂಘದಿಂದ 'ಬೀದರ ಜಿಲ್ಲೆಯ ಆಯ್ದ ಕತೆಗಳು' ಸಂಪಾದಕರು ಹಂಶಕವಿ ಹೊರತಂದಿದ್ದಾರೆ. ಇದರಲ್ಲಿ ೨೮ ಕತೆಗಳಿವೆ ೧೫ ಜನ ಹೊಸ ಕತೆಗಾರರನ್ನು ಗುರುತಿಸಿದ್ದಾರೆ. ೨೦೧೦ ರಲ್ಲಿ ಬೀದರ ಜಿಲ್ಲೆ ಕನ್ನಡ ಸಾಹಿತ್ಯ ಪರಿಷತ್ತು ೧೧ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ 'ಬಾಳಬುತ್ತಿ' ಎಂಬ ಪ್ರಾತಿನಿಧಿಕ ಕಥಾ ಸಂಕಲನವನ್ನು ಹೊರತಂದಿದ್ದಾರೆ. ಇದರ ಸಂಪಾದಕರು ಡಾ. ರಘುಶಂಖ ಭಾತಂಬ್ರಾ, ಪ್ರಧಾನ ಸಂಪಾದಕರು ಸಿದ್ರಾಮಪ್ಪ ಮಾಸಿಮಾಡೆ.

ಈಗಾಗಲೇ ಕಥಾ ಸಾಹಿತ್ಯದಲ್ಲಿ ಅನೇಕ ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿರುವ ದೇಶಪಾಂಡೆಯವರು ಜಿಲ್ಲೆಯ ಹೆಮ್ಮೆಯ ಕತೆಗಾರರಲ್ಲಿ ಒಬ್ಬರು. ೧೯೯೮ರಲ್ಲಿ ಹಾಗೂ ೧೯೯೯ ರಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ 'ಹೆಣ' ಮತ್ತು 'ಗಜ್ರಿ' ಕತೆಗಳಿಗೆ ಕಥಾ ಪ್ರಶಸ್ತಿಗಳೂ ಸಹ ಬಂದಿದೆ. ಇವರ 'ದೇವಯಾನಿ' ಕಥಾಸಂಕಲನಕ್ಕೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ರಾಜ್ಯೋತ್ಸವ ಪ್ರಶಸ್ತಿ ಬಂದಿರುತ್ತದೆ. (೨೦೧೦)

# ಅಧ್ಯಾಯ ೪.

## ❖ ಎಂ.ಜಿ. ದೇಶಪಾಂಡೆ ಅವರ ಜೀವನ ಮತ್ತು ಸಾಧನೆ

ಬೀದರ ಜಿಲ್ಲೆಯ ಸಾಹಿತ್ಯರಂಗವನ್ನು ಕೂಲಂಕುಷವಾಗಿ ಅವಲೋಕಿಸಿದರೆ ಈ ಧರಿನಾಡಿನ ಭಾಗದಲ್ಲಿ ಹೊಸಗನ್ನಡದಿಂದ ಆಧುನಿಕ ಕನ್ನಡದ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಈ ಜಿಲ್ಲೆಯಲ್ಲಿ ಸ್ವಾತಂತ್ರ್ಯದಿಂದೀಚೆಗೆ ಹಲವು ಕಥೆ, ಕಾವ್ಯ, ಕಾದಂಬರಿ, ಪ್ರಬಂಧ ಸಂಕಲನಗಳು ಪ್ರಕಟಗೊಂಡಿದ್ದು ಅದಕ್ಕೆ ಸಾಕ್ಷಿ. ಇದೆ ನಿಟ್ಟನಲ್ಲಿ ಎಂ.ಜಿ. ದೇಶಪಾಂಡೆಯವರು ಈ ನಾಡಿಗೆ ಇಂತಹ ವಿವಿಧ ರೀತಿಯ ಸಾಹಿತ್ಯ ಕೊಡುಗೆಯಾಗಿ ನೀಡುವ ಮೂಲಕ ಬಹುಮುಖ ಪ್ರತಿಭೆಯುಳ್ಳ ಹಿರಿಯ ಸಾಹಿತಿಗಳಾಗಿ ಮಿಂಚಿದ್ದಾರೆ.

ಎಂ.ಜಿ. ದೇಶಪಾಂಡೆಯವರು ಕ್ರಿಶ ೧೯೫೨ರ ಮಾರ್ಚ ೨೧ ರಂದು ಬೀದರ ನಗರದಲ್ಲಿ ಜನಿಸಿದರು. ತಂದೆಯ ಸ್ವರ್ಗೀಯ ಶ್ರೀ ಗೋವಿಂದರಾವ, ಸ್ವರ್ಗೀಯ ತಾಯಿ ಶ್ರೀಮತಿ ಲಕ್ಷ್ಮೀಬಾಯಿ. ಇವರ ಉದರದಲ್ಲಿ ಮೂರನೆ ಮಗನಾಗಿ ಜನಿಸುತ್ತಾರೆ. ಅಕ್ಕ ಶಾಮಲಾ, ಅಣ್ಣ ಮನೋಹರ, ತಮ್ಮಂದಿರು ಮಧುಕರ, ಮುರಲಿಧರ ಹಾಗೂ ತಂಗಿಯರು ನಿರ್ಮಲಾ ಮತ್ತು ವಿಶಾಲಾ ಇದ್ದು ಇವರದು ದೊಡ್ಡ ಕುಟುಂಬ. ಇವರು ಹದಿನೇಳು ವರ್ಷದವರಿರುವಾಗಲೇ ತಾಯಿಯನ್ನು ಕಳೆದುಕೊಂಡು ತಂದೆಯೇ ತನ್ನ ಜವಾಬ್ದಾರಿಯಲ್ಲಿ ಬದುಕಿನ ಬಂಡಿಯ ಗಾಲಿಗಳಾಗುತ್ತಾರೆ.

ಎಂ.ಜಿ. ದೇಶಪಾಂಡೆಯವರ ಪೂರ್ಣ ಹೆಸರು ಮಾಣಿಕರಾವ ಗೋವಿಂದರಾವ ದೇಶಪಾಂಡೆ. ಇವರ ಕಾವ್ಯನಾಮ 'ಲಕ್ಷ್ಮೀಸುತ' ಮತ್ತು ಇವರ ವಚನಾಂಕಿತ 'ಮಾಣಿಕ್ಯ ವಿಠಲ' ಹೌದು. ಇವರ ಸ್ವಂತ ಗ್ರಾಮ ಇಂದಿನ ಆಂಧ್ರ ಪ್ರದೇಶದ 'ಮೋರ್ಗಿ' ಇದ್ದರೂ ಬೀದರ ಹತ್ತಿರವಿದ್ದುದರ ನಿಮಿತ್ಯ ಇವರ ವಿದ್ಯಾಭ್ಯಾಸ ಸಾಹಿತ್ಯ ಕಲೆ ಅರಳಿದ್ದು ಬೀದರಿನಲ್ಲಿ.

ಇವರು ಚಿಕ್ಕವರಿದ್ದಾಗಲೇ ಅಕ್ಕ ಬರೆಯುವ ಕಥೆಗಳಿಂದಾಗಿ ಮತ್ತು ದೊಡ್ಡಮ್ಮನ ಮಗನಾದ ಪ್ರಭಣ್ಣನಿಂದ ತೆಲಗು ಸಾಹಿತ್ಯ ರಚನೆಯಿಂದಾಗಿ ಪ್ರಭಾವಿತರಾಗಿ ಇವರು ಸಾಹಿತ್ಯದ ಗೀಳು ಬೆಳೆಸಿಕೊಂಡರು. ತಂದೆಯವರು ಹೇಳುವ ಪುರಾಣ, ಪರಮ ಪೂಜ್ಯ ಡಾ॥ ಚನ್ನಬಸವ ಪಟ್ಟದ್ದೇವರು ಮೋರ್ಗಿಯಲ್ಲಿ ಪ್ರಪ್ರಥಮಬಾರಿಗೆ ಕನ್ನಡ ಶಾಲೆ ಪ್ರಾರಂಭಿಸಿದ ವಾತಾವರಣಗಳೆಲ್ಲ ಇವರ ಸಾಹಿತ್ಯ ರಚನೆಗೆ ಹೊಸ ಹುರುಪು, ಆಸಕ್ತಿ ಜನಿಸಲು ಕಾರಣವಾಯಿತು.

ಎಂ.ಜಿ. ದೇಶಪಾಂಡೆಯವರು ತನ್ನ ಜಾಯಮಾನದಲ್ಲಿ ಒಬ್ಬ ಉತ್ತಮ ಸಾಹಿತಿಯಾಗಿ ಬೆಳೆಯಬೇಕು ಎನ್ನುವುದೆ ಅವರ ಗುರಿ. ಆ ನಿಟ್ಟಿನಲ್ಲಿ ಅವರ ಪ್ರಯತ್ನವು ಸಾಗುತ್ತ ಮುಂದೆ ಆದು ಬಲಿಯತೊಡಗಿತ್ತು.

ಅವರು ಬಾಲ್ಯದಿಂದಲೇ ಬರೆಯಲು ಪ್ರಾರಂಭಿಸಿದರೆಂಬುದು ಅವರ ಲೇಖನಗಳ ಮಾಲೆ ಕಂಡಾಗ ಅರಿವಾಗುತ್ತದೆ. ಕ್ರಿಶ. ೧೯೬೬ರಲ್ಲಿ ಮೊಟ್ಟ ಮೊದಲು ಬಾರಿಗೆ 'ಶ್ರೀ ಬಾಲಾ ಬಹಾದ್ದೂರ ಶಾಸ್ತ್ರೀಜಿ ಇನ್ನಿಲ್ಲ' ಎಂಬ ಲೇಖನ ಬರೆಯುತ್ತಾರೆ. ಆಗ ಅವರಿಗೆ ೧೪ ವಯಸ್ಸು.

ಇವರು ಶಿಕ್ಷಣದಲ್ಲಿ ಬಿ.ಎ. ಪದವೀಧರರಾಗಿ ಇತರೆ ವಿದ್ಯಾರ್ಹತೆಯೊಂದಿಗೆ ಕರಕುಶಲ ಕೈಗಾರಿಕೆಯ ತರಬೇತಿ ಸಂಸ್ಥೆಯಲ್ಲಿ ' ಉಣ್ಣೆ ಬಟ್ಟೆಗಳ ತಯಾರಿಕೆ' ತರಬೇತಿ ಪಡೆದರೂ ಇವರು ಬಡತನದ ಬವಣೆಯಲ್ಲಿ ಬೆಂದರು. ತಮ್ಮ ೨೦ನೇ ವಯಸ್ಸಿಗೆ ಜಿಲ್ಲಾ ಸಹಕಾರ ಸಂಸ್ಥೆಯೊಂದರಲ್ಲಿ ಕಾರಕೂನ ವೃತ್ತಿಯನ್ನವಲಂಬಿಸಿ ಇದರ ಮೂಲಕ ಬಾಳಿನ ನಿರ್ವಹಣೆಗೆ ಚಾಲನೆ ನೀಡಿದರು. ಗಣಿತ ಎಂದರೆ ದೂರ ಉಳಿಯುತ್ತಿದ್ದ ಅವರು ಕನ್ನಡ ಮಾಧ್ಯಮ ಹಾಗೂ ಕನ್ನಡ ಪ್ರಧಾನ ವಿಷಯ ಹೊಂದಿ ಪದವೀಧರರಾಗಿ ಉದ್ಯೋಗದಲ್ಲಿದ್ದು ಶಿಕ್ಷಣ ಪಡೆದರು.

೧೯೭೦ ರಲ್ಲಿ ಬೀದರಿನಲ್ಲಿ ಇನ್ನೂ ಕನ್ನಡ ಪತ್ರಿಕೆಗಳು ಹುಟ್ಟದಿದ್ದ ಕಾರಣವಾಗಿ ಒಂದಿ 'ದಮನ' ದಿನ ಪತ್ರಿಕೆಯಲ್ಲಿ 'ಜಯ ಭಾರತ ಮಾತಾ', 'ಜೀನಾ' ಕವನಗಳನ್ನು ಬರೆದು ಪ್ರಕಟಿಸಿದರು. ಇವರಿಗೆ ಸಹಕಾರ ಸಂಸ್ಥೆಯಿಂದ ಭಾಲ್ಕಿಗೆ ವರ್ಗವಾದ ಮೇಲೆ ಇವರ ಕನ್ನಡ ಸಾಹಿತ್ಯಕ್ಕೊಂದು ಹೊಸ ಚೇತನ ಬಂತು. ಬೀದರ ಜಿಲ್ಲೆಯ ನವೋದಯದ ಮೊದಲು ತಲೆಮಾರಿನ ಕವಿಗಳಲ್ಲಿ ಒಬ್ಬರಾದ ಇವರು ನಿರಂತರ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಭಾಲ್ಕಿಯಲ್ಲಿ ಪ್ರಮುಖರಾಗಿ ಬೆಳಗುತ್ತಿದ್ದ ಡಾ॥ ಜಿ.ಬಿ.ವಿಸಾಜಿಯವರ ಸಂಪರ್ಕದಲ್ಲಿ ಇವರ ಸಾಹಿತ್ಯಕ್ಕೆ ಎಂಟೆದೆ ಬಲ ಬಂತು. ಇದೇ ವೇಳೆಯಲ್ಲಿ ಈ ನಾಡಿನಲ್ಲಿ ಪ್ರಕಟವಾಗುತ್ತಿದ್ದ ವಾರಪತ್ರಿಕೆ 'ಶಾಂತಿಕಿರಣ' ದಲ್ಲಿ ಇವರ ಅನೇಕ ಚುಟುಕು, ಕವಿತೆ, ಬರಹಗಳು ಪ್ರಕಟಗೊಂಡವು. ಅಲ್ಲದೇ ಇಲ್ಲಿನ ಸಾಹಿತ್ಯ ಅಭಿರುಚಿಯುಳ್ಳ ಕನ್ನಡ ಗೆಳೆಯರ ಒಡನಾಟದಿಂದಾಗಿ ಅನೇಕ ಸಾಹಿತ್ಯ ಅಭಿರುಚಿಯುಳ್ಳ ಅನೇಕ ಸಾಹಿತ್ಯ ಬರಹಗಳನ್ನು ರಚಿಸಲು ಪ್ರೋತ್ಸಾಹ ಲಭಿಸಿತ್ತು. ಆದರೆ ಸಾಹಿತ್ಯ ತನ್ನ ಗರಿ ಬಿಚ್ಚುತ್ತಿರುವಾಗಲೇ ಅವರಿಗೆ ಉದ್ಯೋಗದಲ್ಲಿ ಬೀದರಕ್ಕೆ ವರ್ಗವಾಗಿತ್ತು.

೧೯೭೭ ರಲ್ಲಿ ದೇಶಪಾಂಡೆಯವರು ಬೀದರಿನಲ್ಲಿ ಕನ್ನಡ ಗೆಳೆಯರ ಗುಂಪು ಕಟ್ಟಿಕೊಂಡು 'ಶಾಂತಿ ಕನ್ನಡ ಗೆಳೆಯರ ಬಳಗ' ಎಂಬ ಸಂಘ ಸ್ಥಾಪಿಸಿದರು. ಇಷ್ಟಕ್ಕೇ ತೃಪ್ತರಾಗದ ಇವರು ಇದೇ ವರುಷ 'ಕನ್ನಡಾಂಬೆ' ಎಂಬ ವಾರ ಪತ್ರಿಕೆ ಕೈಯಿಂದ ಬರೆದು ಗೆಳೆಯರ ಗುಂಪಿನಲ್ಲಿ ವಿತರಿಸಿದರು. ಇದೇ ಪ್ರೇರಣೆಯಿಂದ 'ಖ್ಯಾತಿ' ಎಂಬ ಕಲ್ಲಚ್ಚಿನ ಕನ್ನಡ ಕೈ ಬರಹ ಪತ್ರಿಕೆಯಲ್ಲಿ ಸಂಪಾದಕೀಯ ಕತೆ, ಕಾದಂಬರಿ, ಧಾರಾವಾಹಿ, ಕಾವ್ಯ, ಪ್ರಶ್ನೋತ್ತರ, ರಾಜಕೀಯ ಮುಖ್ಯ ಸುದ್ದಿಗಳು, ಬೀದರ ಜಿಲ್ಲೆಯ ವಿಭೂತಿ ಪುರುಷರು, ಕನ್ನಡಕ್ಕಾಗಿ ಸೇವೆ ಸಲ್ಲಿಸಿದ ವ್ಯಕ್ತಿಗಳ ಕುರಿತಂತೆ ಲೇಖನಗಳು, ಹಾಸ್ಯ ಮುಂತಾದವುಗಳು ಬೆಳಕು ಕಂಡು ಜಿಲ್ಲೆಯ ಅನೇಕ ಸಾಹಿತಿಗಳ ಬರಹಗಳು ಪ್ರಕಟಗೊಂಡವು. ಜೊತೆಗೆ ಈ ಪತ್ರಿಕೆಯಲ್ಲಿ ಬೀದರ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳ ಕುರಿತಂತೆ ಚಂದ್ರಶೇಖರ ಸೋಮಶೆಟ್ಟಿಯಂತಹ ಕಲಾವಿದರ ಸಹಾಯದಿಂದ ಚಿತ್ರಗಳ ಸಮೇತ ಲೇಖನಗಳು ಪ್ರಕಟಿಸಿರುವದು ಇವರ ಹೆಗ್ಗಳಿಕೆಗೆ ಸಾಕ್ಷಿ.

೧೯೭೯ ರಲ್ಲಿ ಬೀದರ ತಾಲೂಕು ಪ್ರತಿನಿಧಿಗಳಾಗಿ 'ಬರಹಗಾರರಿಗಾಗಿ' ಸಾಹಿತ್ಯಕೂಟಗಳನ್ನೇರ್ಪಡಿಸಿ ಸಾಹಿತ್ಯ ಕೈ ಕೊಂಡರು. ಜೊತೆಗೆ ಇಲ್ಲಿನ ಬರಹಗಾರರನ್ನು ಪ್ರೋತ್ಸಾಹಿಸಿದರು.

ಬೀದರ ಜಿಲ್ಲೆಯ ನವೋದಯದ ಉದಯೋನ್ಮುಖ ತಲೆಮಾರಿನ ಕವಿಗಳಲ್ಲಿ ಒಬ್ಬರಾದ ಇವರು ನಿರಂತರ ಸಾಹಿತ್ಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತಮ್ಮ ಉದ್ಯೋಗದ ಒತ್ತಡದಲ್ಲಿಯೇ ಕನ್ನಡವನ್ನು ತಮ್ಮ ಹೃದಯದಲ್ಲಿ ತುಂಬಿಕೊಂಡ ಇವರಿಗೆ ಕನ್ನಡ ಸೇವೆಯ ಜೊತೆಗೆ ಈಗಾಗಲೇ ಅನೇಕ ಕನ್ನಡ ಸಾಹಿತ್ಯ ಕೃತಿಗಳನ್ನು ರಚಿಸುವಲ್ಲಿ ಮುಂದಾದರು. ಅದರ ಪ್ರತಿಫಲವೆಂಬಂತೆ ಇವರಿಂದ ಈ ಕೆಳಕಂಡ ಕೃತಿಗಳು ಬೆಳಕು ಕಂಡವು. ಅವುಗಳೆಂದರೆ. ಪ್ರಕಾಶ ಜ್ಯೋತಿ (ಕಾದಂಬರಿ) ೧೯೭೫, ಹೂಬಾಡಿದಾಗ (ಸಾಮಾಜಿಕ ಕಾದಂಬರಿ) ೧೯೭೬, ಕಥಾ ಸಂಕಲನಗಳು 'ಭ್ರಮೆ' (೧೯೮೬) 'ಪಾರಿಜಾತ' (೧೯೯೮), 'ಶ್ರಾವಣಿ' (೨೦೧೦), 'ದೇವಯಾನಿ' (೨೦೧೦), ಕಥೆಯಾದ ಬದುಕು (೨೦೧೦), 'ಹೂ ಬಿಡದ ಗುಲಾಬಿ ಗಿಡ' (೨೦೧೩), ಅನ್ವೇಷಣೆ (ಕವನ ಸಂಕಲನ) ೧೯೯೬, ಒಲವಿನ ಚಿತ್ತಾರಗಳು (ಹನಿಗವನ ಸಂಕಲನ) ೧೯೯೭, ಗೀತಮಾನಸ (ಭಕ್ತಿ ಗೀತೆಗಳು) ೨೦೦೬, ಭಕ್ತಿ ಕುಸುಮಾಂಜಲಿ (ಚಿಂತನ ಕಾವ್ಯಮಾಲೆ) ೨೦೦೬, ಮನಃಸಾಕ್ಷಿ (ಶ್ರೀ ಸಮರ್ಥ ರಾಮದಾಸ ಸ್ವಾಮಿಗಳ ಮರಾಠಿ  ಕಾವ್ಯಾನುವಾದ) ೨೦೦೭, ಕಾವ್ಯ ಚಿತ್ರಾಂಬರಿ (ಚಿತ್ರ ಕವನ ಸಂಕಲನ) ೨೦೦೯, ಇಂಚರ (ಹನಿಗವನ ಸಂಕಲನ)೨೦೦೯, ವಚನ ಚಂದ್ರಿಕೆ(ಆಧುನಿಕ ವಚನ ಸಂಕಲನ) ೨೦೧೦, ಬಸವಣ್ಣನವರ ದೃಷ್ಠಿಯಲ್ಲಿ ಬದುಕು (ಪ್ರಬಂಧ)೨೦೧೦, ಆಶಾಕಿರಣ (ಕಾದಂಬರಿ)೨೦೧೦, ಮೀರಾ(ಚರಿತ್ರೆ) ೨೦೧೦, ಅಜ್ಜನ ಹಳ್ಳಿ( ಶಿಶು ಕವನ ಸಂಕಲ)೨೦೧೦, ವಿರಹ ಪ್ರೀತಿ(ಮಾಧುರ್ಯ ಕವನ ಸಂಕಲನ)೨೦೧೦, ವಿದುರ ನಗರಿ (ಬೀದರ ಜಿಲ್ಲೆಯ ಮಾಹಿತಿ ಕೃತಿ)೨೦೧೦, ಶ್ರೀ ಹರಿ ದತ್ತ ಭಜನಾಮೃತ (ಭಜನೆ ಹಾಡುಗಳು) ೨೦೧೦, ಪ್ರೀತಿ ತಂದ ಫಜೀತಿ (ನಾಟಕ) ೨೦೧೦, ಜೀವನ ಜೋಕಾಲಿ(ತತ್ವಪದ ಸಂಕಲನ)೨೦೧೦, ಜಗನ್ನಾಥ ಮಹಾರಾಜ (ಚರಿತ್ರೆ) ೨೦೧೦.

ಇವರ ಸಾಹಿತ್ಯ ಸೇವೆಗೆ ಮೆಚ್ಚಿ ಜಿಲ್ಲಾ ಮಟ್ಟದಲ್ಲಿ ಕನ್ನಡ ರಾಜ್ಯೋತ್ಸವ ಸಾಹಿತ್ಯ ಹಾಗೂ ಪತ್ರಿಕೆಗೆ ಕುರಿತಂತೆ(೧೯೯೭,೧೯೯೯) ಎರಡು ಬಾರಿ ಪ್ರಶಸ್ತಿ ಹಾಗೂ ಸನ್ಮಾನಗಳು ಲಭಿಸಿದೆ. ಗುಲಬರ್ಗಾ ವಿಶ್ವವಿದ್ಯಾಲಯವು ದಿ.ಜಯತೀರ್ಥರಾಜ ಪುರೋಹಿತ ಸ್ಮಾರಕದತ್ತಿ ಕನ್ನಡ ಕಥಾ ಸ್ಪರ್ಧೆ ೧೯೯೭ ಮತ್ತು ೧೯೯೯ ರಲ್ಲಿ 'ಹೆಣ', ಗಜ್ರಿ ಕಥೆಗಳಿಗೆ ಉತ್ತಮ ಪ್ರಶಸ್ತಿ ನೀಡಿ ಗೌರವಿಸಿದೆ. ಸಂಕ್ರಮಣ ಸಾಹಿತ್ಯ ಸ್ಪರ್ಧೆ ೧೯೯೭ರಲ್ಲಿ 'ಹನಿಗವನ' ಬಹುಮಾನ ವಿದ್ಯಾರಣ್ಯ ಸಾಹಿತ್ಯ ಮಂದಿರ ವತಿಯಿಂದ 'ಕುಮಾರ ರಾಮ ಪ್ರಶಸ್ತಿ'(೨೦೦೧ ರಲ್ಲಿ) 'ದೀಪಾ' ಉತ್ತಮ ಕಥಾ ಪ್ರಶಸ್ತಿ. ಮೊಗವೀರ ಪತ್ರಿಕೆಯ ಕಥಾ ಸ್ಪರ್ಧೆಯಲ್ಲಿ (ಕಥಾ ಪ್ರಶಸ್ತಿ), ಅಮೂಲ್ಯ ಪತ್ರಿಕೆಯಲ್ಲಿ ಉತ್ತಮ ಕಥಾ ಬಹುಮಾನ, ಸ್ನೇಹ ಸಂಬಂಧ, ಪತ್ರಿಕೆಯಲ್ಲಿ ಮೆಚ್ಚುಗೆ ಕಥಾ ಬಹುಮಾನ, ಡಿಡಿ ೧ ರಲ್ಲಿ 'ಚಾಂದಿನಿ, ಸ್ವರಚಿತ ಕಥಾ(ಬಿಸಿಲ ಹನಿಗಳು ಧಾರಾವಾಹಿಯಲ್ಲಿ ಬಿತ್ತರ) 'ದೇವಯಾನಿ' ಕಥಾಸಂಕಲನಕ್ಕೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ರಾಜ್ಯೋತ್ಸವ ಪ್ರಶಸ್ತಿ ಮತ್ತು ಜನಸೇವಾ ಮತ್ತು ಗ್ರಾಮೀಣಾಭಿವೃದ್ಧಿ

ಸಂಸ್ಥೆವತಿಯಿಂದ ಉತ್ತಮ ಕಥಾ ಪ್ರಶಸ್ತಿಗಳು ಬಂದಿವೆ. ಪ್ರಸಾರ ಹೀಗೆ ಹಲವು ಹತ್ತು ಪ್ರಶಸ್ತಿಗಳು ಇವರ ಕೀರ್ತಿ ಕಿರೀಟಕ್ಕೆ ಮುತ್ತುಗಳಾಗಿ ಮಿಂಚಿವೆ.

ಇವರಿಗೆ ಇರ್ವರು ಹೆಣ್ಣು ಮಕ್ಕಳಾದ ಪ್ರಾಂಜಲಾ, ವಾಸಂತಿ ಹಾಗೂ ಓರ್ವ ಮಗ ಶ್ರೀಪಾದ ಉತ್ತಮ ಸಂಸ್ಕಾರವುಳ್ಳವರಾಗಿದ್ದು ಶಿಕ್ಷಣದಲ್ಲಿ ಉತ್ತಮ ಪ್ರಗತಿ ಸಾಧಿಸಿದ್ದಾರೆ. ಸದಾ ಸಾಹಿತ್ಯಕ್ಕೆ ನೀರೆರೆದು ಬೆಳೆಸುತ್ತಿದ್ದ ಮಡದಿ ಶ್ರೀಮತಿ ವೇಣಾಬಾಯಿ ೨೦೧೦ ರಲ್ಲಿ ಇವರನ್ನು ಅಗಲಿದ್ದರು. ದೇಶಪಾಂಡೆಯವರು ಮತ್ತೆ ತನ್ನ ನೋವುಗಳನ್ನು ಬದಿಗೊತ್ತಿ ನಿತ್ಯ ನಿರಂತರ ಸಾಹಿತ್ಯ ಸೇವೆಯಲ್ಲಿ ತನ್ನನ್ನು ತೊಡಗಿಸಿಕೊಂಡು ಬೀದರ ಸ್ಥಳೀಯ ಸಹಕಾರ ಸಂಸ್ಥೆಯಲ್ಲಿ ವ್ಯವಸ್ಥಾಪಕರರಾಗಿ ಕಾರ್ಯನಿರ್ವಹಿಸುತ್ತಿದ್ದ. ಇವರು ಈಗ ನಿವೃತ್ತರಾಗಿದ್ದಾರೆ. ತಮ್ಮ ಬಾಳಿನ ಕರಾಳ ದಿನಗಳಲ್ಲೂ ತನ್ನಲ್ಲಿ ತಾನಾಗಿ, ಸಾಹಿತ್ಯ ದೇವಿಯ ಆರಾಧಕರಾಗಿ ಬಾಳು ಸಾಗಿಸುತ್ತಿದ್ದಾರೆ. ಅವರು ಬರೆಯುವ .ಲೇಖನ, ಕಥಾ, ಕಾವ್ಯ, ಸಂಭ್ರಮ ಕಂಡರೆ ಅವರಲ್ಲಿ ಇನ್ನು ಕನ್ನಡ ಉತ್ಸಾಂಹದ ಜಲ ಬತ್ತಿಲ್ಲ. ಎಂಬುದಕ್ಕೆ ಅವರು ಸಾಕ್ಷಿಯಾಗಿ ನಿಲ್ಲುತ್ತಾರೆ.

ಬೀದರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕಾವ್ಯ, ವಾಚನ, ಅಖಿಲ ಭಾರತ ೬೫ನೆ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (೧೯೯೬ –ಹಾಸನ) ಕಾವ್ಯ ವಾಚನ, ಬಿಜಾಪುರ ಅ.ಭಾ.ಕ.ಸಾ.ನ.ಕಾವ್ಯವಾಚನ ೧೫೦ ಕ್ಕೂ ಹೆಚ್ಚು ಕವಿಗೋಷ್ಠಿಗಳಲ್ಲಿ ಕಾವ್ಯವಾಚನ , ಸಮಾರಂಭಗಳಲ್ಲಿ ಮುಖ್ಯ ಅತಿಥಿ, ಉದ್ಘಾಟಕ, ಅಧ್ಯಕ್ಷತೆ, ಪ್ರಬಂಧ ಮಂಡನೆ ಮುಂತಾದ ಸಕ್ರಿಯ ಗೋಷ್ಠಿಗಳಲ್ಲಿ ಕ್ರಿಯಾಶೀಲರಾಗಿ ಪಾಲ್ಗೊಂಡಿದ್ದು ಇವರ ಕೀರ್ತಿಗೆ ಗರಿ ಮೂಡಿವೆ.

ಇಷ್ಟೇ ಅಲ್ಲದೆ ತನ್ನ ಹೆಸರು ಬೀದರಿಗೆ ಮಾತ್ರ ಸೀಮಿತವಾಗದಿರಲೆಂಬ ಒಳಮಿಡಿತದ ಪ್ರಯತ್ನದ ಫಲವಾಗಿ ರಾಜ್ಯಮಟ್ಟದ ಕನ್ನಡ ಪತ್ರಿಕೆಗಳಲ್ಲಿ ಇವರ ಕಾವ್ಯ ಲೇಖನಗಳು ಪ್ರಕಟ ಗೊಂಡವು ಉದಾಹರಣೆಗೆ, ಪಂಚಾಮೃತ, ವಿಕ್ರಮ, ತರಂಗ, ಮಯೂರ, ತುಷಾರ, ಮಲ್ಲಿಗೆ, ಸಂಯುಕ್ತ ಕರ್ನಾಟಕ, ಅನಂತ ಪ್ರಕಾಶ, ಪ್ರಜಾವಾಣಿ, ವಿಜಯ ಕರ್ನಾಟಕ, ಕರ್ಮವೀರ, ತಿಂಗಳು ಸಂಕ್ಷಿಪ್ತ ಸಮಾಚಾರ, ಅನನ್ಯನುಡಿ, ಅಡ್ವೈಜರ್, ನಿಮ್ಮಲ್ಲರ ಮಾನಸ, ವಿಜಯವಾಣಿ ಕನ್ನಡಪ್ರಭ ಶಾಂತಿಕಿರಣ, ಗೆಳೆಯರ ಚಿಂತನ , ಉತ್ತರ ಕರ್ನಾಟಕ ದಮನ, ಕನ್ನಡ ರತ್ನ, ಅಮೂಲ್ಯ, ಸಂಕ್ರಮಣ, ಮೊಗವೀರ, ಸ್ನೇಹ ಸಂಬಂಧ, ಮುಂತಾದ ರಾಜ್ಯಮಟ್ಟದ, ವಿಭಾಗ ಮಟ್ಟದ, ಜಿಲ್ಲಾ ಮಟ್ಟದ ಪತ್ರಿಕೆಗಳಲ್ಲಿ ಇವರ ಬರಹಗಳು ಬೆಳಕು ಕಂಡಿವೆ.

# ಅಧ್ಯಾಯ ೩.

## -: ಕಥೆಗಳ ವಸ್ತು ವಿವೇಚನೆ :-

"ಸಾಹಿತ್ಯ ಎಂದರೆ ಮಾನಸಿಕ ವಸ್ತುವನ್ನು ಹೊರಗಿನದನ್ನಾಗಿಸುವುದು. ಭಾವದ ವಸ್ತುವನ್ನು ಭಾಷೆಯಲ್ಲಿ ಮೂಡಿಸುವುದು, ದೃಷ್ಟಿಯ ವಿಚಾರವನ್ನು ವಿಶ್ವಮಾನವರನ್ನಾಗಿಸುವುದು, ಕ್ಷಣಕಾಲದ ವಸ್ತುಗಳನ್ನು ಚಿಂತನ ಕಾಲದ್ದನ್ನಾಗಿ ಮಾಡುವುದು ಎಂದು ರವೀಂದ್ರರು, ವಿವರಿಸುವಲ್ಲಿ ಸಾಹಿತ್ಯದ ಅಮೂರ್ತತೆಯನ್ನು ಅದರ ಅನಂತತೆಯನ್ನು ಅರಿವಿಗೆ ತರುತ್ತಾರೆ."[೧]

"ಸಾಹಿತ್ಯ ಎಂದರೆ ಭಾಷೆಯ ಮೂಲ ಬಾಳಿನ ಅಭಿವ್ಯಕ್ತಿ ಎಂದು ಚಿಕ್ಕ ಮಾತುಗಳಲ್ಲೇ ಹಿಡಿಯುವ ಪ್ರಯತ್ನ ಹಡ್ಸನ್ ಅವರದು. ಅದನ್ನು ಮುಂದುವರೆಸಿ ಅದರ ರೂಪಾಂಶ ಹಾಗೂ ಅದು ಕೊಡುವ ಆನಂದ ಮುಖ್ಯ ಎನ್ನುತ್ತಾರೆ. ಸಾಹಿತ್ಯ ಮೂರು ಅಕ್ಷರಗಳಲ್ಲಿ ಮೂರುಲೋಕವನ್ನು ಒಳಗೊಳ್ಳುವಷ್ಟು ಅರ್ಥ ಅದಕ್ಕಿದೆ."[೨]

ಸಾಹಿತ್ಯ ರಚನೆಗೆ ಹಿನ್ನೆಲೆಯನ್ನು ಅರಿಯುವ ಪ್ರಯತ್ನ ಕಷ್ಟ ಮನುಷ್ಯನಲ್ಲಿ ನೋವು-ನಲಿವುಗಳನ್ನು ಆಗು-ಹೋಗುಗಳನ್ನು ಇತರರೊಡನೆ ಹಂಚಿಕೊಳ್ಳಬೇಕೆಂಬ ಮೂಲ ಪ್ರೇರಣೆ ಪ್ರಧಾನವೆಂದು ಗುರುತಿಸಬಹುದಾದರೂ ಸಾಹಿತ್ಯ ಸೃಷ್ಟಿಗೆ ಇಂಥದ್ದೆ ಕಾರಣವೆಂದು ಗುರುತಿಸಬಹುದಾದರೂ ಸಾಹಿತ್ಯ ಸೃಷ್ಟಿಗೆ ಇಂಥದ್ದೆ ಕಾರಣವೆಂದು ಗುರುತಿಸುವುದು ಕಷ್ಟ ಹೇಳಿದರೆ ಹಾಳಾಗುವುದು.

'ಅನುಭವದ ಈ ಕವಿಯು ಹೇಳದಿರೆ ತಾಳಲಾರನೊಕವಿಯು' ಎನ್ನುವ ಅಂತರಂಗದ ಒತ್ತಡ, ಅದರಿಂದ ಬಿಡುಗಡೆ ಪಡೆಯುವ ಆಶಯವೂ ಸಾಹಿತ್ಯ ರಚನೆಗೆ ಪ್ರೇರಣೆಯಾಗಬಹುದು.'[೩]

ಸಾಹಿತ್ಯಕ್ಕೆ ಮೂರು ಅಂಶಗಳು ಮುಖ್ಯಃ ೧) ವಸ್ತು, ೨) ತಲ್ಲೀನತೆ, ೩) ಅನುಭವ. ವಸ್ತು 'ಅದೇ' ಕಣ್ಣಮುಂದಿರುವ ಲೋಕ ಕಾಣುವ ಸಾಮರ್ಥ್ಯ ಉಳ್ಳವನಿಗೆ ಈ ಲೋಕವೇ ತೆರೆದ ವಸ್ತು. ತನ್ನ ಸುತ್ತ ತೆರೆದುನಿಂತಿರುವ ಲೋಕ ಸೌಂದರ್ಯವನ್ನು ಕಂಡು, ತಲ್ಲೀನತೆಯನ್ನು ಪಡೆಯುವಾಗ ಗುಣ ಸಾಹಿತಿಗೆ ಇರಬೇಕು ಈ ತಲ್ಲೀನತೆಯಿಂದ ಪಡೆದ ವಿದ್ಯಾನುಭೂತಿಯೇ ಅನುಭವ ವಿಶೇಷ ಈ ಮೂರು ಯಾವುದೊ ಶುಭ ಮುಹೂರ್ತದಲ್ಲಿ ಒಂದಾಗಿ ಕೃತಿಯು ನಿರ್ಮಾಣವಾಗುತ್ತದೆ.

ಸಾಹಿತ್ಯ ಸಮಾಜದ ಕೇಂದ್ರ ಬಿಂದು, ಸಾಹಿತಿ ಅದರ ಒಂದು ಅಂಗ. ಸಾಹಿತ್ಯ ತನ್ನ ಸಾಹಿತ್ಯಕ್ಕೆ ಪ್ರೇರಣೆಯಾಗುವ ಅಂಶಗಳು, ಸಮಾಜದಿಂದ ಆರಿಸಿಕೊಂಡು, ತನ್ನ ಅನುಭವದಲ್ಲಿ ಹಿಡಿದಿಟ್ಟು ಅದಕ್ಕೆ ಒಂದು ಲಿಪಿಕೊಟ್ಟು, ವಸ್ತು ವಿಷಯವನ್ನು ಸಾಹಿತ್ಯದ ಮೂಲಕ ಹೊರಹಾಕುತ್ತಾನೆ. ಅವು ಕಥೆಗಳ ಮೂಲಕ, ಕಾದಂಬರಿಯ ಮೂಲಕ, ಕವನಗಳ ಮೂಲಕವೇ ಆಗಿರಬಹುದು. ಒಟ್ಟಿನಲ್ಲಿ ಆತ ತನ್ನ ಭಾವನೆಯನ್ನು ಹೊರಹಾಕುತ್ತಾನೆ.

---

೧. ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ ಸಂಪಾದಕ ಡಾ.ಚಿ.ಸಿ. ನಿಂಗಣ್ಣ ಪುಟ ಸಂಖ್ಯೆ ೩.೭೩

೨. ಅದೇ

೩. ಅದೇ

ಸಮಾಜದಲ್ಲಿ ನಡೆಯುವ ನೈಜ ಘಟನೆಗಳ ಸುತ್ತ ತನ್ನ ಬರವಣಿಗೆಯ ಬಳ್ಳಿಯನ್ನು ಸುತ್ತಿ ಕಲಾತ್ಮಕ ಮಾದರಿಯಲ್ಲಿ ಸಾಹಿತ್ಯ ರಚನೆ ಮಾಡುತ್ತಾನೆ. ಹಾಗಾದರೆ ಕಲಾತ್ಮಕತೆ ಎಲ್ಲವು ಸಾಹಿತ್ಯವಾಗಲಾರದು, ಹಾಗೆಯೇ ಅನುಭವ ಎಲ್ಲವು ಸಾಹಿತ್ಯವಾಗಲಾರದು. ಕಲಾತ್ಮಕತೆಯಲ್ಲಿ ಸೃಜನಶೀಲತೆ, ವಾಸ್ತವದ ನೆರಳನ್ನು ಸಾಹಿತ್ಯದಲ್ಲಿ ಮೂಡಬೇಕು. ಅಂದಾಗ ಮಾತ್ರ ಅದು ಒಂದು ಸಾಹಿತ್ಯ ಆಗಲು ಸಾಧ್ಯವಾಗುತ್ತದೆ.

ಬರಹಗಾರ ಆತ ಕಂಡಿದ್ದು, ಕೇಳಿದ್ದು, ಓದಿ, ತಿಳಿದುಕೊಂಡಿದ್ದು, ಕಲ್ಪಿಸಿದ್ದು ಎಲ್ಲವನ್ನು ಸೇರಿಸಿ ಜೋಡಿಸಿದಾಗ ಮಾತ್ರ ಅದೊಂದು ಸೃಜನಶೀಲ ಬರವಣಿಗೆ ಎನ್ನಲು ಸಾಧ್ಯವಾಗುತ್ತದೆ. ಅಂಥ ಬರವಣಿಗೆಯ ಸಾಹಿತ್ಯ ಪ್ರಕಾರದಲ್ಲಿ ಸಣ್ಣಕಥೆ ಸಾಹಿತ್ಯವು ಕೂಡ ಒಂದಾಗಿದೆ. ಕಥಾವಸ್ತು, ಕತೆಗಾರ, ಕೇಳುವವ ಇವುಗಳಲ್ಲಿ ಒಂದೇ ಒಂದು ಇದ್ದರೂ ಕತೆಯಾಗದು, ಒಂದೇ ಒಂದು ಇಲ್ಲದಿದ್ದರೂ ಕತೆಯಾಗಲಾರದು. ಈ ಮೂರು ಬೇಕೆ ಬೇಕು.

ಕಥೆಯನ್ನು ಬರೆಯುವಾಗ ಅಲ್ಲಿ ವಸ್ತು ವಿವೇಚನೆ ಮಹತ್ವದ್ದಾಗಿರುತ್ತದೆ. ಕಥೆಗಾರ ಶೈಲಿ, ತಂತ್ರ ಭಾಷೆ, ವರ್ಗ, ಪ್ರಭಾವ, ಕೌಟಂಬಿಕ ಹಿನ್ನಲೆ, ಸಾಮಾಜಿಕ ಪರಿಸರ ಇವುಗಳ ಹಿನ್ನಲೆಯಲ್ಲಿ ಕಥಾವಸ್ತು ವಿವೇಚಿಸುತ್ತಾರೆ.

ಈ ಕಥೆಗಳು ಕಥಾವಸ್ತು ವಿವೇಚನೆ ಈ ಕೆಳಗಿನಂತಿವೆ.

- ಗ್ರಾಮೀಣ ಹಾಗೂ ಕೌಟಂಬಿಕ ಬದುಕು.
- ದಲಿತ ಮತ್ತು ಬಡವರ್ಗದ ಶೋಷಣೆ.
- ಸ್ತ್ರೀ ಸಂವೇದನೆ
- ಪ್ರೀತಿ – ಪ್ರಣಯ
- ಮಾನವೀಯ ಸಂವೇದನೆ.
- ಕಥೆಗಾರರ ದೃಷ್ಟಿಯಲ್ಲಿ ಸಾಮಾನ್ಯ ವಿಷಯ.

ಗ್ರಾಮೀಣ ಹಾಗೂ ಕೌಟಂಬಿಕ ಬದುಕು:-

ಎಂ.ಜಿ. ದೇಶಪಾಂಡೆಯವರ "ಪಾರಿಜಾತ" ಕಥಾ ಸಂಕಲನ ಒಂದು ವಿಶಿಷ್ಟವಾದ ಕಥಾ ಸಂಕಲನವಾಗಿದೆ. ಇದರಲ್ಲಿ ಒಂದು ಪುಟಕ್ಕೆ ಒಂದೊಂದು ಕಥೆಯನ್ನು ಅಂದರೆ ಪುಟದಲ್ಲೊಂದು ಪುಟ್ಟ ಕಥೆಗಳ ಸಂಕಲನ ಇದಾಗಿದೆ. "ಕಾವ್ಯ ಕ್ಷೇತ್ರಕ್ಕೆ ಮಿನಿಕವನಗಳು ಹೆಗೋ ಹಾಗೆ, ಕಥಾ ಸಾಹಿತ್ಯ ಕ್ಷೇತ್ರಕ್ಕೆ ಪುಟದಲ್ಲೊಂದು ಪುಟ್ಟ ಕಥೆಯಾಗಿದೆ"[೪] ಅದೇ ಕಥಾಸಂಕಲನದಲ್ಲಿನ ಒಂದು ಕಥೆ "ಬದುಕು" ಕಥೆಯಾಗಿದೆ.

---

೪. 'ಕಥೆಗಾರರಾಗಿ ದೇಶಪಾಂಡೆ' ಅಶೋಕಕೋರೆ 'ಸಾಹಿತ್ಯ ಮಂದಾರ' ಸಂಪಾದರಕ ಹಂಸಕವಿ ಪುಟ ಸಂಖ್ಯೆ ೬೨

ಇಲ್ಲಿ ಬಡತನದ ಬೇಗೆಯಲ್ಲಿ ಜೀವನವನ್ನು ಸಾಗಿಸುತ್ತಿದ್ದ ಶಂಕರನಿಗೆ ಪತ್ನಿ ಶಾಂತಿ ಮತ್ತು ನಾಲ್ಕು ಮಕ್ಕಳ ತಂದೆಯಾಗಿದ್ದ. ಅದೊಂದು ದಿನ ನಗರಕ್ಕೆ ಮುಖ್ಯ ಮಂತ್ರಿಗಳು ಬರುತ್ತಾರೆ, ರಸ್ತೆಗಳನ್ನು ಶೃಂಗರಿಸುವ ಕೆಲಸದಲ್ಲಿ ತಾನು ದುಡಿದು ತನ್ನ ಬದುಕನ್ನು ಸಾಗಿಸುವೆನೆಂದು ಸಂತಸದಿಂದ ಕುಣಿದಾಡುತ್ತಾನೆ. ಗುತ್ತಿಗೆದಾರರಿಗೆ ಭೇಟಿಯಾಗಿ ರಸ್ತೆಗಳು ಶೃಂಗರಿಸಲು ಆಚೆ, ಈಚೆ ತಗ್ಗು ಅಗೆಯುತ್ತಿದ್ದ, ಇನ್ನಷ್ಟು ಗಳಿಕೆ ಮಾಡಲು ದುಡಿಯುತ್ತಿದ್ದ. ಆದರೆ ರಾತ್ರಿಯಾದರೂ ಮನೆಗೆ ಬಾರದೆ ಇದ್ದ ಗಂಡನನ್ನು ಹುಡುಕಿಕೊಂಡು ಶಾಂತಿ ಬಂದಳು. ಅರೆಬತ್ತಲೆಯಲ್ಲಿದ್ದ ಅವನನ್ನು ಕಂಡು "ಎನ್ರಿ "ಎನ್ರಿ"[೫]. ಅಂದಾಗ ಅವನ ದೇಹ ತಣ್ಣಗಾಗಿತ್ತು. ರಾತ್ರಿಯಲ್ಲಿ ಬೀದಿ ದೀಪಗಳು ಮೌನಾವಾಗಿ ಹೊಳೆಯುತ್ತಿದ್ದವು.

ಇವರ ಮತ್ತೊಂದು ಕಥೆ 'ಪಟಾಕಿ' ಇದರಲ್ಲಿ ಬಡವರ್ಗದ ಚಿತ್ರಣದ, ಜೊತೆ-ಜೊತೆಗೆ ಗಂಡ-ಹೆಂಡತಿಯ ಸಂಬಂಧದ ಗಟ್ಟಿತನತೆ ಇಲ್ಲಿ ಎದ್ದು ಕಾಣುತ್ತದೆ. ವ್ಯವಸಾಯವೇ ತನ್ನ ಜೀವನಕ್ಕೆ ಆಧಾರವೆಂದು ನಂಬಿದ್ದ ಮಲ್ಲುವಿಗೆ ಅತಿ ವೃಷ್ಟಿಯಾಗಿ, ಬೆಳೆ ಬೆಳೆದರೂ ಮಳೆಗೆ ಹಾಳಾಗಿ, ಅರ್ಧ ಎಕರೆ ಭೂಮಿ ಸಹ ಬೆಳೆಯದೇ ಬಂಜರಾಗಿತ್ತು. ಕೈಯಲ್ಲಿ ಸ್ವಲ್ಪವೂ ಹಣವಿಲ್ಲ. ದೀಪಾವಳಿ ಹಬ್ಬ ಬೇರೆ. ದೀಪಕ್ಕೂ ಎಣ್ಣೆ ಇಲ್ಲದ ಪರಿಸ್ಥಿತಿ ಅಂತಹದರಲ್ಲಿ ಕೊನೆಯ ಮಗುವಿಗೆ ಜ್ವರ. ಮಗುವಿಗೆ ಹಾಲು ಕುಡಿಸಲು ಪಾರುವಿನ ಎದೆಯಲ್ಲಿ ಹಾಲಿಲ್ಲ. ಇಂಥಹ ಸಂಧಿಗ್ಧ ಪರಿಸ್ಥಿತಿಯನ್ನು ಊರಿನ ಸಾಹುಕಾರ ಚನ್ನರಾಯರಿಗೆ ಹೇಳಿದಾಗ ಮಲ್ಲುವಿನ ಸುಂದರ ಪತ್ನಿಯಾದ ಪಾರುವನ್ನು ಬಯಸಿದನು. ಯಾವ ರೀತಿ ಹಣದ ಮುಂದೆ ಸೌಂದರ್ಯ ಆಟವಾಡುತ್ತದೆ ಎಂಬುದನ್ನು ಇಲ್ಲಿ ನೋಡಬಹುದು. ಪಾರು ಮತ್ತು ಮಲ್ಲು ಮನೆಗೆ ಬಂದಾಗ ಮಗು ಸತ್ತು ಹೋಗಿತ್ತು. ಕುಟುಂಬದ ಬಡತನ ಮಗುವಿನ ಪಾಲಿಗೆ ಶಾಪವಾಯಿತು.

ಇವರ ಇನ್ನೊಂದು ಕಥೆ 'ಹಸಿವೆ' ಇದರಲ್ಲಿಯೂ ಸಹ ಬಡವರ್ಗದವರ ಚಿತ್ರಣವಿದೆ, ಅವರ ಅಸಾಯಕತೆಯನ್ನು ಚಿತ್ರಿಸಿದ್ದಾರೆ. ಒಬ್ಬ ಬಡ ಹೆಣ್ಣು ಮಗಳು ಮೂಕವೇದನೆಯನ್ನು ಅಭಿವ್ಯಕ್ತಪಡಿಸಿದ್ದಾರೆ.

ಬಸ್ಸಿನಲ್ಲಿ ಪ್ರಯಾಣಿಸುತ್ತಿರುವಾಗ ಅಲ್ಲಿ ಇಬ್ಬರು ದಂಪತಿಗಳು ತಮ್ಮ ಮಕ್ಕಳಿಗೆ ಬೇಕಾದನ್ನು ಕೊಡಿಸುತ್ತಿದ್ದರು. ಅವರ ಹಿಂದೆ ಕುಳಿತ ಹೆಣ್ಣು ಮಗಳ ಮಗ ಬಾಳೆಹಣ್ಣನ್ನು ಕೇಳಿ ಅಳುತ್ತಿರುವಾಗ ಅವಳು ಅದನ್ನು ಕೊಡಿಸುವ ಸ್ಥಿತಿಯಲ್ಲಿ ಇರಲಿಲ್ಲ. ಟೀಕೆಟು ಕೊಟ್ಟಾಗ ಕಂಡಕ್ಟರ ಅದರ ಹಿಂದೆ ೨ ರೂ. ಬರೆದಿದ್ದ ಆಗ ಆ ಹೆಣ್ಣು ಮಗಳು ಬಸ್ಸಿನಿಂದ ಇಳಿದ ತಕ್ಷಣ ಬಾಳೆ ಹಣ್ಣನ್ನು ಕೊಡುವುದಾಗಿ ಮಗುವನ್ನು ಸಂತೈಸುತ್ತಾಳೆ. ಇದನ್ನು ಕೇಳಿ ಮಗು ಜೋರಾಗಿ ಅಳುತ್ತದೆ. ಅದೇ ಗುಂಗಿನಲ್ಲಿ ಬಸ್ಸಿನಿಂದ ಕೆಳಗಿಳಿಯುವಾಗ ಆ ಎರಡು ರೂಪಾಯಿ ಮರೆಯುತ್ತಾಳೆ. ಎರಡು ರೂಪಾಯಿ ಎಂದು ಬಸ್ಸಿನ ಹಿಂದೆ ಬೆನ್ನು ಹತ್ತಿದಾಗ ಬಸ್ಸು ಮುಂದೆ ಹೋಯಿತು. ಮತ್ತೆ ಅವಳ ಮುಂದೆ ಹೊಡೆಯುವ ಗಂಡ, ಬೈಯ್ಯುವ ಅತ್ತೆಯ ಚಿತ್ರಣ ಬಂದಿತ್ತು.

೫. 'ಪಾರಿಜಾತ ಬದುಕು' ಎಂ.ಜಿ.ದೇಶಪಾಂಡೆ ಪುಟ ಸಂಖ್ಯೆ ೪೫.

ಇವರ ಇನ್ನೊಂದು ಕಥೆ "ನೈಜ ಬಾಳು" ಇದರಲ್ಲಿ ಹಾಸಿಗೆ ಇದ್ದಷ್ಟೆ ಕಾಲು ಚಾಚಬೇಕು ಎನ್ನುವ ಗಾದೆಮಾತು ಲಲಿತಾಳ ಬದುಕಿನಲ್ಲಿ ಪ್ರೀತಿಯನ್ನು ತುಂಬುತ್ತದೆ ಎಂಬುದನ್ನು ಅತ್ಯಂತ ಚೆನ್ನಾಗಿ ಚಿತ್ರಿಸಿದ್ದಾರೆ.

ಶ್ರೀಮಂತರ ಮನೆಯ ಹತ್ತಿರವೇ ಮನೆಕಟ್ಟಿಕೊಂಡಿದ್ದ ವಿರೂಪಾಕ್ಷನಿಗೆ ಅವಳ ಹೆಂಡತಿ ನೆರೆ ಮನೆಯ ಮಹಿಳೆಯ ಮನೆಯಲ್ಲಿದ್ದ ವಸ್ತುಗಳೆಲ್ಲಾ ತನಗೂ ಬೇಕೆಂದು ಹಟಮಾಡಿದಾಗ, ಮೂರನೇ ದರ್ಜೆಯ ಗುಮಾಸ್ತ ವಿರೂಪಾಕ್ಷ ಸ್ವಲ್ಪ ಸಾಲ ಪಡೆದು ಕಲರ್ ಟಿ.ವಿ.ಯೊಂದಿಗೆ ಮನೆಗೆ ಬರುತ್ತಿರುವಂತೆ, ಅಪಾರ ಆಸ್ತಿಗಾಗಿ ಶ್ರೀಮಂತರು ಲಂಚದಿಂದ ಗಳಿಸಿದ್ದೆಲ್ಲವೂ ಸರ್ಕಾರ ವಶಪಡಿಸಿಕೊಂಡದ್ದನ್ನು ನೋಡುತ್ತಾನೆ. ಅಷ್ಟರಲ್ಲಿಯೇ ಲಲಿತಾ ಇದನ್ನು ಕಂಡು ನಮ್ಮ ಬದುಕಿಗೆ ಪ್ರೀತಿಯೊಂದೆ ಸಾಕು ಎಂದಾಗ ವಿರೂಪಾಕ್ಷ ನೆಮ್ಮದಿಯ ಉಸಿರು ಬಿಟ್ಟನು.

ಎಂ.ಜಿ. ದೇಶಪಾಂಡೆಯವರ ಕಥಾ ಸಂಕಲನ "ಹೂ ಬಿಡದ ಗುಲಾಬಿ ಗಿಡ" ಇದರಲ್ಲಿಯೂ ಸಹ ಒಟ್ಟು ಹನ್ನೊಂದು ಕಥೆಗಳಿವೆ. ಈ ಕಥಾಸಂಕಲನದಲ್ಲಿ ಬರುವ ಕಥೆ "ಪರಿಹಾರ ಧನ".

ಇಲ್ಲಿ ಹಳ್ಳಿಯ ಒಬ್ಬ ಬಡ ಹೆಣ್ಣುಮಗಳ ಜೀವನಕ್ಕೆ ಕೊಡಲಿ ಏಟು ಬೀಳುವ ಪರಿಸ್ಥಿತಿಯನ್ನು ಚಿತ್ರಿಸಿದ್ದಾರೆ. ಈ ಕಥೆಯಲ್ಲಿ ಶಿಕ್ಷಿತ ಜನರು ಹಳ್ಳಿ ಜನರ ಮುಗ್ಧತೆಯನ್ನು ಯಾವ ರೀತಿ ಕೆಳಮಟ್ಟದ್ದಾಗಿ ಕಾಣುತ್ತಾರೆ. ಎಂಬುದನ್ನು ಚಿತ್ರಿಸಿದ್ದಾರೆ. ಹಳ್ಳಿಯಲ್ಲಿ ಒಂದೂವರೆ ಎಕರೆ ಜಮೀನಿನಲ್ಲಿ ಜೀವನ ಸಾಗಿಸುತ್ತಿದ್ದ ಬಸಮ್ಮಳಿಗೆ ಒಬ್ಬನೇ ಮಗಲಕ್ಷ್ಮಣ, ಮಗ ವಿದ್ಯಾಭ್ಯಾಸಕ್ಕೆಂದು ಗುಲ್ಬರ್ಗಾನಲ್ಲಿದ್ದ. ಐವತ್ತರ ವಯಸ್ಸು ಹೊಂದಿದ್ದ ಬಸಮ್ಮಾ ಇರುವ ಒಂದು ಕೋಣೆಯನ್ನು ಸ್ವಚ್ಛವಾಗಿರಿಸಿಕೊಂಡಿದ್ದಳು.

ಒಂದು ದಿನ 'ರತ್ನ' ಎಂದು ಹೆಸರಿಟ್ಟ ಎಮ್ಮೆಯನ್ನು ತೆಗೆದುಕೊಂಡು ಜಮೀನಿನ ಕಡೆ ಹೋಗುತ್ತಾಳೆ. ಅಲ್ಲಿ ಕರೆಂಟ್ ಇಲಾಖೆಯವರು ನೆಲ ಅಗಳುತ್ತಿದ್ದರು. ಆಗ ಅವಳು ಅದನ್ನು ನೋಡಿದಾಗ ಕೆಲಸ ಮಾಡುವವರಲ್ಲಿ ಒಬ್ಬ 'ನಿಮ್ಮ ಹೊಲದ ಬೆಲೆಗೆ ತಕ್ಕ ಹಣ ಸರ್ಕಾರ ಕೊಡುತ್ತದೆ'[೬] ಎಂದನು. ಅದೇ ಗುಂಗಿನಲ್ಲಿ ಮನೆಗೆ ಬಂದಾಗ ಲಕ್ಷ್ಮಣನು ಸಹ ಬಂದನು. ನಡೆದ ವಿಷಯ ಮಗನಿಗೆ ವಿವರಿಸುತ್ತಾಳೆ. ಮೂರನೇ ದಿನ ಇಲಾಖೆಯವರು ಮನೆಗೆ ಬಂದು ಸರ್ಕಾರದ ಕಾನೂನನನು ವಿವರಿಸಿ ಹೇಳಿದರೂ ಲಕ್ಷ್ಮಣ, ಬಸಮ್ಮಾ ಅದಕ್ಕೆ ಒಪ್ಪುವುದಿಲ್ಲ ಊರಿನ ಗೌಡರು ಹೆಗೋ ಸಂತೈಸುತ್ತಾರೆ. ಆದರೂ ಸಹ ಹೊಲ ಸರ್ಕಾರದ ಅಧೀನಕ್ಕೆ ಹೋಗುತ್ತದೆ. ಆದರೆ ಈ ಚಿಂತೆಯಲ್ಲಿಯೇ ಬಡಕಲಳಾಗಿ ಇದ್ದ ಒಂದು ಎಮ್ಮೆಯನ್ನು ಸಹ ಬಡತನದಿಂದ ಮಾರಿ ಬಿಡುತ್ತಾಳೆ. ಈ ಕೊರಗಿನಲ್ಲಿಯೇ ಬಸಮ್ಮ ಸಾವನ್ನಪ್ಪುತ್ತಾಳೆ. ಎರಡು ಲಕ್ಷ ಪರಿಹಾರ ಧನ ಘೋಷಣೆಯಾದಂತೆ ಸಾವಿನಲ್ಲಿ ಬಸಮ್ಮಾ ಹೂನಗೆ ಮೂಡಿಬಂದಂತೆ ಲಕ್ಷ್ಮಣನಿಗೆ ಕಾಣಿಸುತ್ತದೆ. ಅಂದರೆ ಇಲ್ಲಿ ಸರ್ಕಾರದ ಪರಿಹಾರ ಧನದ ನಿರ್ಲಕ್ಷವೇ ಬಸಮ್ಮನ ಸಾವಿಗೆ ಮುಳ್ಳಾಯಿತು.

---

೬. ಹೂಬಿಡದ ಗುಲಾಬಿ ಗಿಡ 'ಪರಿಹಾರಧನ' ಎಂ.ಜಿ.ದೇಶಪಾಂಡೆ ಪುಟ ಸಂಖ್ಯೆ ೫೨

ಇವರ ಇನ್ನೊಂದು ಕಥೆ 'ಅಂತರಂಗದೊಳಗೆ' ಇಲ್ಲಿ ಒಬ್ಬ ಹೆಣ್ಣು ಮಗಳ ಅಸಾಯಕ ಪರಿಸ್ಥಿತಿಯನ್ನು ಹೇಳುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ ಗಂಡಿನ ದಬ್ಬಾಳಿಕೆ ಹೆಣ್ಣನ್ನು ಯಾವ ಪರಿಸ್ಥಿತಿಗೆ ತಳ್ಳುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ಒಂದು ಸಹಕಾರ ಸಂಸ್ಥೆಯಲ್ಲಿ ಕ್ಲರ್ಕ್ ಹುದ್ದೆ ಮಾಡುವ ಶಾಂತಾರಾಮನಿಗೆ ಸುಮಂಗಲ, ಪ್ರೇಮಾ, ಶೇಖರ ಮಕ್ಕಳು, ಹೆಂಡತಿ ಅರುಂಧೃತಿಯಿಂದ ಕೂಡಿದ ಪುಟ್ಟ ಕುಟುಂಬ ಇದ್ದ, ಕಡಿಮೆ ಸಂಬಳದಲ್ಲಿಯೇ ಮನೆಯನ್ನು ನಡೆಸಿಕೊಂಡು ಹೋಗುವ ಹೆಂಡತಿ ಒಂದು ಕಡೆಯಾದರೆ, ಅದರಲ್ಲಿಯೇ ದುಂದುವೆಚ್ಚ ಮಾಡುವ ಗಂಡ ಇನ್ನೊಂದು ಕಡೆ. ಕುಟುಂಬ ಸಾಗಿಸಿಕೊಂಡು ಹೋಗುವುದಕ್ಕಾಗಿ ವಿದ್ಯೆವಂತೆಯಾಗಿದ್ದ ಅರುಂದ್ರುತಿ ಸಹ ಉದ್ಯೋಗ ಮಾಡಲು ಮುಂದಾದಳು. ಅದಕ್ಕೂ ಅಡ್ಡಗಾಲು ಹಾಕುತ್ತಾನೆ. ಪತಿಯ ಹಬ್ಬದ ಮುಂಗಡ ಸಾಲ ತರಲು ಅವನ ಬ್ಯಾಂಕಿಗೆ ಹೋದಾಗ ಅದಕ್ಕೆ ಕೋಪಗೊಂಡ ಶಾಂತಾರಾಮ ಮುಂದೆ ಇಬ್ಬರು ಪುತ್ರಿಯರು, ಸತಿ ಅರುಂದ್ರುತಿಯನ್ನು ಕಳೆದುಕೊಳ್ಳಬೇಕಾಗಿ ಬರುವುದು.

ಗಂಡನ ಮನೆಯನ್ನು ನಿಭಾಯಿಸಲು ಅಸಾಧ್ಯವೆನಿಸಿದಾಗ ಹೆಂಡತಿ ಅದಕ್ಕೆ ಆ ಜವಾಬ್ದಾರಿಯನ್ನು ಹೊರಲಿಕ್ಕೆ ಸಹಾಯಕಳಾಗಿ ನಿಂತಾಗ ಅದು ಉತ್ತಮ ಕುಟುಂಬವಾಗಿ ಮಾರ್ಪಾಡಾಗಲು ಸಾಧ್ಯವಾಗುತ್ತದೆ ಎನ್ನುವುದೇ ಈ ಕಥೆಯಲ್ಲಿ ಮೂಡಿಬಂದಿರುವುದು. ಆದರೆ ಗಂಡನ ದುಂದುವೆಚ್ಚ ಇಡೀ ಕುಟುಂಬದ ಸರ್ವನಾಶಕ್ಕೆ ತಳಹದಿಯು ಸಹ ಇಲ್ಲಿ ಮೂಡಿಬಂದಿದೆ.

ದೇಶಪಾಂಡೆಯವರ 'ದೇವಯಾನಿ' ಕಥಾ ಸಂಕಲನದಲ್ಲಿನ 'ಮೂಕವೇದನೆಗಳು' ಒಂದು ಕಥೆಯಾಗಿದೆ.

ಇಲ್ಲಿ ಹಳ್ಳಿಯಲ್ಲಿ ನಡೆಯುವ ಹೊಲಗಳಲ್ಲಿನ ಕಬ್ಬಿಣಗಾಣದ ಚಿತ್ರಣವನ್ನು ತೋರಿಸುವುದರ ಜೊತೆಗೆ ಹದಿ ಹರೆಯದ ಮನಸ್ಸುಗಳ ಪ್ರೀತಿಯನ್ನು ಚಿತ್ರಿಸಿದ್ದಾರೆ. ಭಾವನೆಯ ತೊಳಲಾಟವನ್ನು ಕಥೆಯಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಚೆನ್ನಿ, ಕೆಂಚರ ಸಂಬಂಧ ಅದು ಯಾವ ರೀತಿಯ ಸಂಬಂಧ ಎಂದು ನಿರ್ಧಾರ ಮಾಡಲು ಸಾಧ್ಯವಾಗುವುದಿಲ್ಲ. ಜೀವನದಲ್ಲಿ ಒಂದೊಂದು ಸಲ ನಮ್ಮ ಎದುರು ಹೆಸರು ನೀಡಲಾಗದ ಸಂಬಂಧಗಳು ಬಂದು ನಮ್ಮ ಎದುರು ನಿಲ್ಲುತ್ತವೆ. ಆಗ ಮನುಷ್ಯ ಮುಕ್ತನಾಗಿ ನಿಲ್ಲುತ್ತಾನೆ. ಅಂತಹ ಒಂದು ಕಥೆಯನ್ನು ಇಲ್ಲಿ ಚಿತ್ರಿಸಿದ್ದಾರೆ.

ಕೆಂಚ, ಚೆನ್ನಿ ಕಬ್ಬಿನ ಕಾರ್ಖಾನೆಯಲ್ಲಿ ಕೆಲಸಮಾಡುತ್ತಿದ್ದರು. ಪರಸ್ಪರರಲ್ಲಿ ಕಾಳಜಿ ಆತ್ಮೀಯತೆಯು ಕೂಡ ಬೆಳೆಯತೊಡಗಿತು. ಚೆನ್ನಿಯ ಬಗ್ಗೆ ಕೆಂಚನ ಮನದಲ್ಲಿ ಪ್ರೀತಿಯ ಭಾವನೆ ಉದ್ವೇಗಗೊಳ್ಳತೊಡಗಿತ್ತು. ಹಾಗೆಯೇ ಕೆಂಚನ ಬಗ್ಗೆ ಚೆನ್ನಿಗೂ ಸಹ ಆಗತೊಡಗಿತು. ಇಬ್ಬರು ಒಬ್ಬರಿಗೊಬ್ಬರ ಭಾವನೆಗೆ ಸ್ಪಂದಿಸುತ್ತಿದ್ದರು. ಅದೊಂದು ದಿನ ಕ್ರಷರಗೆ ಕಬ್ಬು ನೀಡುತ್ತಾ ಇದ್ದಾಗ

ಕೆಂಚನ ಕೈ ಕ್ರಪರ ಒಳಗೆ ಹೋಗಿತ್ತು. ಆಗ ಪ್ರಾಣ ಪಕ್ಷಿ ಹಾರಿ ಹೋಗಿತ್ತು. ಹೀಗೆ ಇಲ್ಲಿ ಚೆನ್ನಿ ಭಾವನೆಗಳ ಹೊಯ್ದಾಟದಲ್ಲಿ ತೊಡಗಿದಳು.

ಹೀಗೆ ಇಲ್ಲಿ ಕಥೆಗಾರರು ಗ್ರಾಮೀಣ ಜನ ಜೀವನ ಅವರ ಬದುಕು, ಸಾಮಾಜಿಕ ಜೀವನ, ಆರ್ಥಿಕ ಜೀವನವನ್ನ ಅಲ್ಲಿಯ ಪರಿಸರವನ್ನು ತಮ್ಮ ಕಥೆಯಲ್ಲಿ ಚಿತ್ರಿಸಿದ್ದಾರೆ. ಪ್ರತಿನಿತ್ಯ ಸಮಾಜದಲ್ಲಿ ನಡೆಯುವ ಜ್ವಲಂತ ಸಮಸ್ಯೆಗಳನ್ನು ಆಧಾರವಾಗಿಟ್ಟುಕೊಂಡು ಬರೆದ ಅವರ ಕಥೆಗಳನ್ನು ವಿಶ್ಲೇಷಿಸಿದಾಗ ಗ್ರಾಮೀಣರ ಜನ ಜೀವನ ನಗರ ಜನ ಜೀವನಕ್ಕಿಂತ ಭಿನ್ನವಾಗಿದೆ ಎಂದು ತಿಳಿದು ಬರುತ್ತದೆ.

## ➢ ದಲಿತ ಮತ್ತು ಬಡವರ್ಗದ ಶೋಷಣೆ:-

ಆದಿ ಕಾಲದಿಂದಲೂ ಈ ವರ್ಗವನ್ನು ತುಳಿತಕ್ಕೆ ಒಳಪಡಿಸಿದ್ದಾರೆ. ಹಿಂದೆ ಬ್ರಾಹ್ಮಣ ಕ್ಷೇತ್ರಿಯ, ವೈಶ್ಯ, ಶೂದ್ರ ಎಂಬ ವರ್ಗವನ್ನು ಮಾನವರು ತಮ್ಮ ಅನುಕೂಲಕ್ಕಾಗಿ ಮಾಡಿಕೊಂಡಿದ್ದು, ಆದರೆ ಬರುಬರುತ್ತಾ ಅದೇ ಜಾತಿಯಾಗಿ ಪರಿಣಮಿಸಿ ಸಮಾಜವನ್ನು ಅಶಾಂತಿಗೆ ಗುರಿಮಾಡಿದೆ. ದಲಿತ ಮತ್ತು ಬಡವರ್ಗವನ್ನು ಇಂದಿಗೂ ಕೂಡ ಶೋಷಣೆಗೆ ಗುರಿ ಮಾಡುತ್ತಿದ್ದಾರೆ. ಗ್ರಾಮೀಣದಲ್ಲಿ ಸಾಹುಕಾರರು, ಗೌಡ್ರು ಇವರಿಂದ ಶೋಷಣೆಯಾಗುತ್ತಿದ್ದರೆ, ನಗರದಲ್ಲಿ ಬಂಡವಾಳಶಾಹಿಗಳಿಂದ ಶೋಷಣೆಯನ್ನು ಕಾಣುತ್ತೇವೆ. ಶೋಷಣೆಯ ಚಿತ್ರಣವನ್ನು ಕಥೆಗಾರರು ತಮ್ಮ ಕಥೆಗಳಲ್ಲಿ ಚಿತ್ರಿಸಿದ್ದಾರೆ.

ಎಂ. ಈ. ದೇಶಪಾಂಡೆಯವರ 'ದೇವಯಾನಿ' ಕಥಾ ಸಂಕಲನದಲ್ಲಿ 'ಹೆಣ' ಒಂದು ಕಥೆಯಾಗಿದೆ. ಈ ಕಥೆಯಲ್ಲಿ ಕರಾಳ ಮತ್ತು ದಾರುಣದ ಕಥೆಯನ್ನು ಚಿತ್ರಿಸಿದ್ದಾರೆ. ಗೌಡನ ದಬ್ಬಾಳಿಕೆ, ದೌರ್ಜನ್ಯವನ್ನು ಓದುತ್ತಾ ಹೊದರೆ ಎಂಥವರಲ್ಲಿಯೂ ಕಿಚ್ಚು ಏಳುವಂತಹ ಕಥೆಯಾಗಿದೆ.

ಈ ಕಥೆಯಲ್ಲಿ ಬಸವಂತರಾಯ ಗೌಡ ಶಂಭುಲಿಂಗ-ಸೇವಂತಿ, ಶಂಕರ- ಚಂದ್ರಕಲಾಳ ಪಾತ್ರದ ಮೂಲಕ ಶೋಷಣೆಯ ಕಥೆಯನ್ನು ಹೆಣೆದಿದ್ದಾರೆ. ಬಸವಂತರಾಯಗೌಡ ವಯಸ್ಸಿಗೆ ಬಂದ ಹೆಣ್ಣು ಮಕ್ಕಳನ್ನು ಬಯಸುವವ, ಇಲ್ಲಿ ಶಂಭುಲಿಂಗ ಎಂಬ ಶ್ರೀಮಂತ ಮನೆತನದ ಒಡೆಯ, ಈತನ ಮಗಳು ಸೇವಂತಿ. ಇವಳು ದೊಡ್ಡವಳಾದ ನಂತರ ಗೌಡ ಇವಳನ್ನು ಬಯಸುತ್ತಾನೆ. ಆಗ ಶಂಭುಲಿಂಗ, ವಿರೋಧಿಸಿದಾಗ ಆತನನ್ನು ಹಾಗೂ ಆತನ ಹೆಂಡತಿಯನ್ನು ಕೊಲೆಮಾಡುತ್ತಾನೆ. ಕೊಲೆಮಾಡಿ ಸೇವಂತಿಯನ್ನು ಹೊತ್ತುಕೊಂಡು ಹೋಗುತ್ತಾನೆ. ಸೇವಂತಿಯ ಮೇಲೆ ಅತ್ಯಾಚಾರ ಎಸಗಿಬಾಗ ಸೇವಂತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಈ ವಿಷಯ ಊರ ತುಂಬಾ ಹರಡಿದರೂ ಯಾರೊಬ್ಬರು ಗೌಡ ವಿರುದ್ಧ ಮಾತನಾಡಲಿಲ್ಲ. ಊರಲೊಬ್ಬ ಶಂಕರ ಅನ್ನುವ ವ್ಯಕ್ತಿ ಚಂದ್ರಕಲಾಳನ್ನು ಮದುವೆಯಾಗುತ್ತಾನೆ. ಮತ್ತೆ ಗೌಡ ಚಂದ್ರಕಲಾಳನ್ನು ಬಯಸುತ್ತಾನೆ. ಚಂದ್ರಕಲಾ

ಧೈರ್ಯವಂತೆಯಾಗಿರುತ್ತಾಳೆ. ಅವಳು ಗೌಡನ ಮನೆಗೆ ಹೋದಾಗ ಗೌಡ ಆಕೆಯ ಮೇಲೆ ಅತ್ಯಾಚಾರ ಎಸಗಲು ಪ್ರಯತ್ನಿಸಿದಾಗ ಗೌಡನನ್ನು ಹೊಡೆದು ಅಲ್ಲಿಂದ ಓಡಿಬರುತ್ತಿರುವಾಗ ಗೌಡನ ಆಳುಮಕ್ಕಳು ಆಕೆಯ ಬೆನ್ನು ಹತ್ತಿದಾಗ ಅವಳು ಬಾವಿಯಲ್ಲಿ ಬಿದ್ದು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ.

ಗೌಡನ ದಬ್ಬಾಳಿಕೆ ದೌರ್ಜನ್ಯಕ್ಕೆ ಮುಗ್ಧ ಜನರ ಜೀವನ ನಾಶವಾಗುವುದನ್ನೇ ಇಲ್ಲಿ ಚಿತ್ರಿಸಿದ್ದಾರೆ.

ದೇಶಪಾಂಡೆಯವರ 'ಭ್ರಮೆ' ಕಥಾ ಸಂಕಲನದಲ್ಲಿನ 'ಅಗ್ನಿ ಪ್ರಳಯ' ಕಥೆ ಸತ್ಯ ಘಟನಾ ಪ್ರಧಾನವಾದ ಕಥೆ. ಬಡವರ್ಗದ ಅಸಾಯಕತೆ, ಅದರ ನರ್ತನಕ್ಕೆ ಜೀವನದ ಹಂಗನ್ನು ಮರೆತು ಅನ್ನದ ಬೆನ್ನ ಹತ್ತಿದಾಗ ಅಲ್ಲಿ ಅವರಿಗೆ ದೊರೆತಿದ್ದು ಮರಣದ ಆಹುತಿ. ಈ ಕಥೆಯಲ್ಲಿ ಅಂತಹ ನೀತಿಯನ್ನು ಅಥವಾ ಸನ್ನಿವೇಶವನ್ನು ನಾರಾಯಣನ ಪಾತ್ರದ ಮೂಲಕ ತೋರಿಸಿದ್ದಾರೆ.

ನಾರಾಯಣನಿಗೆ ಎರಡು ಮಕ್ಕಳು ರವಿ ಮತ್ತು ಮೋನಿ ಒಂದು ದಿನ ದುಡಿಯದಿದ್ದರೆ ಆತನಿಗೆ ಹೊಟ್ಟೆ ತುಂಬುತ್ತಿರಲಿಲ್ಲ. ಅಂತಹ ಸ್ಥಿತಿಯಲ್ಲಿ ದುರ್ಘಟನೆಯಾದ ಸ್ಥಳದಿಂದ ಧಾನ್ಯ ಕದ್ದು ತರಲು ಹೋಗಿ ಜೀವನವನ್ನೇ ಕಳೆದುಕೊಳ್ಳುತ್ತಾನೆ. ಮುಂದೆ ಮಗ ಸಹ ಊರವರ ಹಿತಕ್ಕಾಗಿ ತನ್ನ ಪ್ರಾಣವನ್ನೇ ಅರ್ಪಿಸುತ್ತಾನೆ.

ಎಂ.ಜಿ. ದೇಶಪಾಂಡೆಯವರ 'ಪಾರಿಜಾತ' ಕಥಾ ಸಂಕಲನದಲ್ಲಿ ಬರುವ 'ದಲಿತೋದ್ಧಾರ' ಕಥೆ ಒಂದು ಪುಟ್ಟ ಕಥೆಯಾಗಿದೆ. ಈ ಕಥೆಯಲ್ಲಿ ಬಡವರ್ಗದವರ ಶೋಷಣೆ ಮೇಲ್ವರ್ಗದವರ ಡಂಬಾಚಾರವನ್ನು ಕಾಣುತ್ತೇವೆ. ದೇಶವನ್ನು ಕಾಪಾಡುತ್ತೇವೆ ಎಂದು ಆಶ್ವಾಸನೆ ಕೊಡುವ ಮಂತ್ರಿಗಳ ಆಡಂಬರವನ್ನು ಇಲ್ಲಿ ತೋರಿಸಿದ್ದಾರೆ.

ಸ್ವತಂತ್ರ ದಿನಾಚಾರಣೆ ಸಂದರ್ಭದಲ್ಲಿ ನಗರದ ಬೀದಿ, ಬೀದಿಗಳನ್ನು ಶೃಂಗರಿಸಲಾಗುತ್ತದೆ. ಶಾಲಾ ಮಕ್ಕಳು ಕ್ರೀಡಾಂಗಣಕ್ಕೆ ಧಾವಿಸುತ್ತಿರುತ್ತಾರೆ. ಮಂತ್ರಿಗಳು ಕಾರು ಒಂದರ ಹಿಂದೆ ಒಂದು ಹೋಗುತ್ತಿರುತ್ತವೆ. ಇದನ್ನು ವೀಕ್ಷಿಸುತ್ತಾ ನಿಂತ ಬಡ ಹೆಣ್ಣುಮಗಳು ಜೊತೆಗೆ ಆಕೆಯ ಕಂದಮ್ಮ, ಆಕೆಯ ಮಗು ಆ ದೃಶ್ಯವನ್ನು ನೋಡಿ ಕುಣಿಯುತ್ತಿತ್ತು. ನೋಡು ನೋಡುತ್ತಲೆ ಆಕೆಯ ಕೈಯಿಂದ ಬಿಡಿಸಿಕೊಂಡು ಮಂತ್ರಿಯ ಕಾರಿಗೆ ಸಿಲುಕಿಕೊಂಡು ಪ್ರಾಣವನ್ನು ಬಿಟ್ಟಿತು. ಮುಂದೆ ಹೋದ ಕಾರು ನಿಲ್ಲದೇ ತಿರುಗಿ ಆ ಮಗುವನ್ನು ನೋಡಲಲ್ಲ. ಮಂತ್ರಿಗಳು ಧ್ವಜಾರೋಹಣ ಮಾಡಿ ಬಡ ಬಗ್ಗರ ಬಗ್ಗೆ ಮಾತನಾಡುತ್ತಿರುತ್ತಾರೆ. ಆ ಕಡೆ ಆ ಹೆಣ್ಣು ಮಗಳು ಮಗುವಿನ ಅಂತ್ಯಕ್ರಿಯೆಗೆ ಭೂಮಿಯನ್ನು ಹುಡುಕುತ್ತಿರುತ್ತಾಳೆ.

ಇದೇ ಕಥಾ ಸಂಕಲನದಲ್ಲಿ ಬರುವ ಇವರ ಮತ್ತೊಂದು ಕಥೆ 'ಅಪವಾದ'. ಈ ಕಥೆಯಲ್ಲಿಯೂ ಕೂಡ ಬಡವರ್ಗದವರ ಮೇಲೆ ಮೇಲ್ವರ್ಗದವರ ಶೋಷಣೆ ದಬ್ಬಾಳಿಕೆಯನ್ನು ಚಿತ್ರಿಸಿದ್ದಾರೆ. ಇಲ್ಲಿ ಸತೀಶನಿಗೆ ಬಲತ್ಕಾರದ ಅಪವಾದ ಹೊರಿಸಿದರೂ ಆತ ಅದನ್ನು ಪ್ರತಿಭಟಿಸದೆ ಇರೋದು ಬದಲಿಗೆ ಆತ ಮೂಕವೇದನೆಯನ್ನು ಅನುಭವಿಸುತ್ತಾನೆ. ಕಥೆಗಾರರು ಕಥೆಗಳಲ್ಲಿ ನೋವಿನ ವಿರುದ್ಧ ಧ್ವನಿಯನ್ನು ಹೊರಡಿಸಲಿಲ್ಲ ಯಾಕೆ?

ಧರಮಸಿಂಗ ಅಂಗಡಿಯಲ್ಲಿ ಸತೀಶ ಕೆಲಸ ಮಾಡುತ್ತಿದ್ದ ಒಂದು ದಿನ ಧರಮಸಿಂಗನಿಗೆ ಹೊಟ್ಟೆ ಹಸಿವಾಗುತ್ತದೆ. ಆತ ಸತೀಶನಿಗೆ ಮನೆಯಿಂದ ಊಟ ತರಲು ಹೇಳುತ್ತಾನೆ. ಧನಿಯನ ಹೆಂಡತಿ ಸತೀಶನನ್ನು ಮೋಹಿಸುತ್ತಾಳೆ. ಇದು ತಪ್ಪು ಎಂದು ತಿರಸ್ಕರಿಸಿದ್ದರಿಂದ ಧರಮಸಿಂಗನ ಹೆಂಡತಿ ಆತನ ಮೇಲೆ ಬಲತ್ಕಾರದ ಅಪವಾದ ಹೊರಿಸುತ್ತಾಳೆ.

ಹೀಗೆ ಕಥೆಗಾರರು ತಮ್ಮ ಕಥೆಯಲ್ಲಿ ದಲಿತ ವರ್ಗ, ಬಡವರ್ಗದ ಮೂಕ ವೇದನೆಯನ್ನು ಅವರ ನೋವು, ಹೋರಾಟ, ಅಶಾಂತಿ, ತೊಳಲಾಟಗಳನ್ನು ಅವರ ಕಥೆಗಳಲ್ಲಿ ಚಿತ್ರಿಸಿದ್ದಾರೆ. ಈ ಎಲ್ಲಾ ಕಥೆಗಳನ್ನು ಓದಿದಾಗ ಅಲ್ಲಿ ವಸ್ತು ವಿಷಯ ಒಂದೇಯಾಗಿದ್ದರೂ ಕಥೆಗಳನ್ನು ಹೆಣೆಯುವಿಕೆಯಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಕೆಲವು ಕಥೆಗಳು ಸಾಮಾನ್ಯ ಎನ್ನಿಸಿದರೆ ಕೆಲವು ಕಥೆಗಳು ಪರಿಣಾಮಕಾರಿ ಅನಿಸುತ್ತವೆ.

## ➢ ಸ್ತ್ರೀ ಸಂವೇದನೆ:-

ಹೆಸರೆ ಸೂಚಿಸುವಂತೆ ಇಲ್ಲಿ ಸ್ತ್ರೀಗೆ ಸಂಬಂಧಪಟ್ಟ ವಸ್ತು ವಿಷಯವಾಗಿರುತ್ತವೆ. ಆಕೆಗೆ ಮಾಡುವ ಶೋಷಣೆ ಆಕೆಯ ತೊಳಲಾಟವನ್ನು ಚಿತ್ರಿಸಿದ್ದಾರೆ. ಸಂವೇದನೆ ಅಂದ ತಕ್ಷಣ ಇಲ್ಲಿ ನೆನಪಾಗುವುದು ಮಾಸ್ತಿಯವರ 'ಗೌತಮಿ ಹೇಳಿದ' ಕಥೆ. ಈ ಕಥೆಯಲ್ಲಿ 'ಮಾಲಿನಿ' ಪಾತ್ರದ ಮೂಲಕ ಹೆಣ್ಣಿನ ತೊಳಲಾಟ, ಆಕೆಯ ಚಂಚಲ ಸ್ವಭಾವ ಭರತ್ವಾಜನ ಮರಣ, ನಂತರ ಮಾಲಿನಿ ಕಾಶ್ಯಪದತ್ತನ ಮೋಹಿಸುವುದು, ಕೊನೆಗೆ ಮಾಲಿನಿ ಕಾಶ್ಯಪದತ್ತನಿಂದ ಪರಿವರ್ತನೆಯನ್ನು ಹೊಂದುತ್ತಾಳೆ. ಇಲ್ಲಿ ಸ್ತ್ರೀಯ ಸ್ವಾಭಾವಿಕ ಚಂಚಲತೆಯನ್ನು ಚಿತ್ರಿಸಿದ್ದಾರೆ. ಹೇಗೆ ಇಲ್ಲಿ ಬರುವ ಕಥೆಗಾರರು ಸ್ತ್ರೀಯರ ಸೌಮ್ಯತೆ, ಸೃಜನಶೀಲತೆ, ಸ್ವಾಭಿಮಾನ, ಚಂಚಲತೆ ಚಿತ್ರಿಸಿದ್ದಾರೆ. ಹಲವಾರು ದೃಷ್ಟಿಕೋನದಿಂದ ಸ್ತ್ರೀಯ ಬದುಕನ್ನು ನೋಡುವ ಪ್ರಯತ್ನ ಮಾಡಿದ್ದಾರೆ.

ಇಲ್ಲಿ ದಲಿತ, ಹಿಂದುಳಿದ, ಅಲ್ಪಸಂಖ್ಯಾತ, ಬಹುಸಂಖ್ಯಾತ, ಅಸಹಾಯಕ, ನಿರ್ಗತಿಕ ಮಹಿಳೆಯರು ಶೋಷಣೆಗೊಳಗಾದ ಸ್ಥಿತಿಯು ಪರಿಣಾಮಕಾರಿಯಾಗಿ ಚಿತ್ರಿತಗೊಂಡಿದೆ. ಸಮಾಜದ ವ್ಯವಸ್ಥೆಯ ಎತ್ತರದಲ್ಲಿರುವ ಗೌಡ, ಕುಲಕರ್ಣಿ, ಸಾಹುಕಾರರು ಮಾಡುವ ದುಷ್ಕೃತ್ಯಗಳನ್ನು ಕಥೆಗಾರರು ವಿವರಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾ ಸಂಕಲನದಿಂದ ಆಯ್ದ ಮತ್ತೊಂದು ಕಥೆ 'ಗೌತಮಿ' ಇಲ್ಲಿ ಹೆಣ್ಣಿನ ವೈರಾಗ್ಯವನ್ನು ಸೃಷ್ಟಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಕಥೆ

ಸಂಪೂರ್ಣವಾಗಿ 'ಗೌತಮಿ' ಎನ್ನುವ ಹೆಣ್ಣಿನ ಪಾತ್ರದ ಸುತ್ತ ಹೆಣೆಯಲಾಗಿದ್ದು, ಆಕೆಯ ಆತ್ಮವಿಶ್ವಾಸದ ಚಿತ್ರಣವನ್ನು ಈ ಕಥೆಯಲ್ಲಿ ನೀಡಿದ್ದಾರೆ.

ಗೌತಮಿಯನ್ನು ಬಯಸಿ ಚಕ್ರಧರನು ಪತ್ರ ಬರೆದಾಗ 'ನಾನು ನಿಶ್ಚಿಂತೆಯಾಗಿ ಬದುಕುವುದು ನಿಮಗೆ ಇಷ್ಟವಾಗದೆ? ಎಂದು ಗೌತಮಿ ಕೇಳುತ್ತಾಳೆ.[೭] ಆಗ ಚಕ್ರಧರನು ನಾನು ನಿಮ್ಮನ್ನು ಇಷ್ಟಪಟ್ಟಿದ್ದು ಪ್ರೀತಿಗಲ್ಲ, ನಿಮ್ಮ ವೈರಾಗ್ಯ ತುಂಬಿದ ಕಂಗಳಿಗೆ, ನಿಮ್ಮನ್ನು ನೋಡಿದಾಗ ನನಗೆ ಅಕ್ಕಮಹಾದೇವಿ ನೆನಪಾಗುತ್ತಾಳೆ ಎಂದು ಹೇಳುತ್ತಾನೆ. ಅದಕ್ಕೆ ಗೌತಮಿ ಕೇಳುವ ಮಾತು "ಹಾಗಾದರೆ ನನ್ನ ಮದುವೆಯಾಗುವಿರಾ? ಮಂಗಲಸೂತ್ರ ಕಟ್ಟುವಷ್ಟಕ್ಕೆ ಮಾತ್ರ ಪತಿ. ಆ ಮೇಲೆ ಅಂತರಂಗದಲ್ಲಿ ನಾವಿಬ್ಬರೂ ಅಣ್ಣತಂಗಿ ಯಾಗಿರಬೇಕು".[೮] ಈ ರೀತಿ ಹೇಳಿದಾಗ ಆಕೆಯನ್ನು ಅಕ್ಕ ಎಂದು ಸಂಭೋದಿಸುತ್ತಾನೆ. ಕೃಷ್ಣಕಾಂತ, ಮೃಣಾಲಿನಿ ಗೌತಮಿಯ ತಂದೆ-ತಾಯಿ ಆಕೆಯ ಮದುವೆ ಮಾಡಬೇಕು ಎಂದಾಗ ಆಕೆ ಪ್ರಾಪಂಚಿಕ ವ್ಯಾಮೋಹ ತೊರೆದು ಮನೆಬಿಟ್ಟು ಹೋಗುವ ನಿರ್ಧಾರ ಮಾಡುತ್ತಾಳೆ.

ಎಂ.ಜಿ. ದೇಶಪಾಂಡೆಯವರ ಈ ಮೇಲಿನ ಕಥಾ ಸಂಕಲನದ ಮತ್ತೊಂದು ಕಥೆ 'ಮೌನಿ' ಈ ಕಥೆಯಲ್ಲಿ ಒಂದು ಹೆಣ್ಣಿನ ಚಿಂತಾಜನಕ ಸ್ಥಿತಿಯನ್ನು ಕುರಿತು ಹೇಳಲಾಗಿದೆ. ಯೌವ್ವನದಲ್ಲಿ ಗಂಡನ ಸುಖ ಸಿಗದೆ ನೋವು ಅನುಭವಿಸುವುದು. ಮುಪ್ಪಿನಾವಸ್ಥೆಯಲ್ಲಿ ಮಗನಿಂದ ನೋವನ್ನು ಅನುಭವಿಸುವುದು. ಇಡೀ ಜೀವನ ಜೇಡರ ಹುಳು ತನ್ನ ಬಲೆಯನ್ನು ಹೆಣೆದು ಆ ಬಲೆಯಲ್ಲಿ ಪ್ರಾಣವನ್ನು ಕೊಡುವಂತೆ ಈಕೆಯ ಬಾಳಾಗಿತ್ತು. ಇಲ್ಲಿ ಒಂದು ಹೆಣ್ಣು ಸಮೃದ್ಧಿಯ ಜೀವನ ನಡೆಸಲು ಕೌಟಂಬಿಕ ಪಾತ್ರ ಮಹತ್ವದಾಗಿರುತ್ತದೆ. ಇಲ್ಲಿ ಮೌನಿಯ ನೋವಿನ ಕೂಗಿಗೆ ಯಾರು ಧ್ವನಿಯಾಗಲಿಲ್ಲ.

ಮೌನಿಗೆ ಬಹಳ ಕಾಲದಿಂದಲೂ ಮದುವೆಯಾಗಿರುವುದಿಲ್ಲ. ಗಂಡಸರನ್ನು ಕಂಡರೆ ಅವಳು ವೈರಾಗ್ಯ ತಾಳುತ್ತಿದ್ದಳು. ಅವರ ದೂರದ ಸಂಬಂಧಿಕ ಗೋಪಿ ಸಹವಾಸದಿಂದ ಆಕೆಗೆ ಪುರುಷರ ಬಗ್ಗೆ ಇದ್ದ ಭಾವನೆ ಬದಲಾಯಿತು. ಆಗ ಅವಳು ಶಾಂತು ಅನ್ನುವ ವ್ಯಕ್ತಿಯನ್ನು ಮದುವೆಯಾಗುತ್ತಾಳೆ. ಆತ ಕುಡುಕನಾಗಿರುತ್ತಾನೆ. ಮದುವೆಯಾದ ನಂತರ ಶಾಂತು ಮೌನಿನ ಬಿಟ್ಟು ಹೊರಟು ಹೋಗುತ್ತಾನೆ. ಆಗ ಮೌನಿ ತಂಗಿಯ ಮನೆಗೆ ಹೋಗುತ್ತಾಳೆ. ಅಲ್ಲಿ ಭಾವನ ವಕ್ರದೃಷ್ಟಿ ಬೀಳುತ್ತದೆ. ತಂಗಿಯ ಮನೆಯಿಂದ ಹೊರಬರುತ್ತಾಳೆ. ಶಿವನಿಗೆ ಜನ್ಮ ನೀಡುತ್ತಾಳೆ. ನಂತರ ಒಂದು ದಿನ ಶಾಂತು ಬಂದು ಆಕೆಯನ್ನು ಕರೆದುಕೊಂಡು ಹೋಗುತ್ತಾನೆ. ಮತ್ತೆ ಅದೇ ಕುಡಿತದಿಂದ ಸಾಯುತ್ತಾನೆ. ಶಿವ ಕುಡ ಮನೆ ಬಿಟ್ಟು ಹೋಗುತ್ತಾನೆ. ಮೌನಿ ಮತ್ತೆ ತನ್ನ ತವರುಮನೆಯ ದಾರಿಯನ್ನು ಹಿಡಿಯುತ್ತಾಳೆ.

---

೭. ಶ್ರಾವಣಿ 'ಗೌತಮಿ' ಎಂ.ಜಿ. ದೇಶಪಾಂಡೆ ಪುಟ ಸಂಖ್ಯೆ ೩

೮. ಅದೇ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾಸಂಕಲನದಲ್ಲಿನ ಕಥೆ "ಮುತ್ತಾದ ಗಳಿಗೆಗಳು" ಈ ಕಥೆಯಲ್ಲಿ ಒಂದು ಹೆಣ್ಣಿನ ಸಂವೇದನಾ ಗುಣವನ್ನು ಚಿತ್ರಿಸಿದ್ದಾರೆ. ಮಕ್ಕಳಿಲ್ಲ ಅನ್ನುವ ಮೂಕವೇದನೆ ಅನುಭವಿಸುತ್ತಿರುವ ಸ್ವಾತಿಯ ಆತ್ಮವೇದನೆ ಆಕೆಯ ಗಂಡನಾದ ಹರೀಶನ ಅಭಿಲಾಷೆಯನ್ನು ಚಿತ್ರಿಸಿದ್ದಾರೆ.

ಕಾಲೇಜಿನ ವಿದ್ಯಾಭ್ಯಾಸದ ದಿನಗಳಲ್ಲಿ, ಗ್ರಂಥಾಲಯದಲ್ಲಿ ಪ್ರಾರಂಭವಾದ ಹರೀಶ, ಸ್ವಾತಿಯ ಪ್ರೀತಿ-ಪ್ರಣಯ ಮುಂದೆ ಮದುವೆಯಾಗುವರೆಗೂ ಹೋಗಿ, ಇಬ್ಬರು ಮದುವೆಯಾಗುತ್ತಾರೆ. ಆದರೆ ಮದುವೆಯಾಗಿ ಐದು ವರ್ಷವಾದರೂ ಅವರಿಗೆ ಮಕ್ಕಳಾಗಿರಲಿಲ್ಲ. ಈ ಮಾತು ಅಮ್ಮನಿಂದಲೂ ಪದೇ ಪದೇ ಕೇಳಿಸುತ್ತಿರುತ್ತದೆ. ಆಗ ಹರೀಶನ ತಾಯಿ ಆತನಿಗೆ ಮರುಮದುವೆ ಮಾಡಲು ನಿರ್ಧರಿಸುತ್ತಾರೆ. ಇದಕ್ಕೆ ಸ್ವಾತಿಯೂ ಸಹ ಸಮ್ಮತಿಸುತ್ತಾಳೆ. ಆಗ ಹರೀಶ ಯಾವ ಮಕ್ಕಳು ಬೇಕಿಲ್ಲ ಬಾಳಿನಲ್ಲಿ ಪ್ರೀತಿಯನ್ನು ಹಂಚಿಕೊಂಡು ಬದುಕುತ್ತೇವೆ ಎಂದು ಮಗುವನ್ನು ದತ್ತು ತೆಗೆದುಕೊಳ್ಳುವ ನಿರ್ಧಾರ ಮಾಡುತ್ತಾನೆ. ಅಂದರೆ ಸ್ವಾತಿಯು ತನ್ನ ಗಂಡನ ಮದುವೆಗೆ ಒಪ್ಪಿಗೆ ಸೂಚಿಸಿದ್ದು, ಅವಳ ಸಂವೇದನಾ ಶೀಲಗುಣ ಇಲ್ಲಿ ಚಿತ್ರಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ಭ್ರಮೆ' ಕಥಾ ಸಂಕಲನ ಒಳಗೊಂಡ 'ಪ್ರವಚನ' ಕಥೆಯು ಪ್ರಮುಖವಾದ ಕಥೆಯಾಗಿದೆ. ಇಲ್ಲಿಯೂ ಸಹ ಸ್ತ್ರೀ ಸಂವೇದನೆಯನ್ನು ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

'ಪ್ರವಚನ' ಎಂದರೆ ಆಧ್ಯಾತ್ಮಕ ಭಾವನೆ ತಟ್ಟನೆ ಹೊಳೆಯುತ್ತದೆ. ಆಧ್ಯಾತ್ಮಕ ನೆಲೆಯಲ್ಲಿ ಸ್ತ್ರೀ ಶೋಷಣೆಯನ್ನು ಈ ಕಥೆಯಲ್ಲಿ ಚಿತ್ರಿಸಿದ್ದಾರೆ. ಗುರು ಅನ್ನುವ ಶಬ್ದಕ್ಕೆ ಯುಗ ಯುಗಾಂತರಕ್ಕೂ ಗೌರವ ನಿಡಿರುವುದನ್ನು ನಾವು ಕಾಣುತ್ತೇವೆ. ಆದರೆ ಒಂದು ಹೆಣ್ಣಿನ ಶೀಲಾಪಹರಣ ಮಾಡಿದ ಕ್ರೂರಿ ಗುರುವನ್ನು ಇಲ್ಲಿ ಚಿತ್ರಿಸಿದ್ದಾರೆ.

ಈ ಕಥೆಯಲ್ಲಿ ಗೋಮುಖ ವ್ಯಾಘ್ರನಾದ ಸ್ವಾಮಿಜಿಯ ಪ್ರವಚನಗಳಿಗೆ ಜನರು ಆಕರ್ಷಿತರಾಗುತ್ತಾರೆ. ಸಂಸಾರದಲ್ಲಿ ಈಜಿ ದಡಸೇರದವರು ವೈರಾಗ್ಯ ತಳೆದು ಮೋಹ ಪಾಶಗಳನ್ನು ತೊರೆದು ಆಧ್ಯಾತ್ಮದ ಕಡೆ ಆಸಕ್ತಿ ತೋರುತ್ತಾರೆ. ಬ್ರಹ್ಮಚರ್ಯಗಳ ವಿಷಯ ಕುರಿತು ಮಾಡುತ್ತಿದ್ದ ಪ್ರವಚನ ಕೇಳಿದ ಭಕ್ತಾದಿಗಳು ಸ್ವಾಮಿಜಿಯನ್ನು ದೇವರ ಸ್ಥಾನದಲ್ಲಿ ನೋಡುತ್ತಾರೆ. ಸ್ವಾಮಿಜಿಯವರು ಸಹಜವಾಗಿ ಮಾತಾಡಿದರೂ ಜೀವನ್ಮುಕ್ತಿಗೆ ಮಾರ್ಗದರ್ಶನ ನಂಬುತ್ತಾರೆ. ಮೂಢನಂಬಿಕೆಗಳಿಗೆ ಮನಸೋಲುವುದು. ಸತ್ಸಂಗಗಳಲ್ಲಿ ಭಾಗವಹಿಸುವುದು ಅನಕ್ಷರಸ್ತರು ಒಂದು ಕಡೆಯಾದರೆ ವಿದ್ಯಾವಂತರೆನಿಸಿಕೊಂಡ ಶ್ರೀಮಂತ ವರ್ಗ ಹಾಗೂ ರಾಜಕಾರಣಿಗಳು ಇಂದು ಮಠಗಳ ಉದ್ಧಾರಕರಂತೆ ತಮ್ಮ ಬೇಳೆ ಬೇಯಿಸಿಕೊಳ್ಳಲು ಕೀಲುಗೊಂಬೆಗಳಾಗುತ್ತಾರೆ.

ಸಮಾಜದಲ್ಲಿ ಸ್ತ್ರೀಯರಿಗೆ ವಿಶಿಷ್ಟವಾದ ಸ್ಥಾನ ಇದೆ. ಹೆಣ್ಣುಗಳು ಮಾರಾಟಗಳಿಗೆ, ತಮ್ಮ ತೆವಲನ್ನು ತೀರಿಸಿಕೊಳ್ಳಲು ಗುಪ್ತವಾಗಿ ಸೇವೆ ಮಾಡಿಸಿಕೊಳ್ಳುವ ನೆಪದಲ್ಲಿ ಮುಗ್ಧ ಹೆಣ್ಣು ಮಕ್ಕಳ ಶೀಲಗೆಡಿಸುವ ಅಮಾನವೀಯ ಕೃತ್ಯವೆಸಗುವುದು, ಭಕ್ತರನ್ನು ತಮ್ಮ ವಾಕಾಚಾತುರ್ಯದಿಂದ ತಮ್ಮತ್ತ ಸೆಳೆದುಕೊಳ್ಳುವುದು. ಸ್ವಾಮಿಜಿ ಯುವತಿಯೊಬ್ಬಳೊಂದಿಗೆ ರಾಸ ಕ್ರೀಡೆಯಲ್ಲಿರುವಾಗ ಭಕ್ತನೊಬ್ಬ ನೋಡಿ ಮಠಕ್ಕೆ ಬರುವ ಭಕ್ತರಿಗೆ ಸತ್ಯವನ್ನು ಹೇಳಿದಾಗ, ಹೇಳಿದವರಿಗೆ ಹುಚ್ಚೆಂದು ಸ್ವಾಮಿಜಿ ಹೇಳಿದ ಮಾತನ್ನು ನಂಬಿ ಕೇಕೆ ಹಾಕುವ ಭಕ್ತವೃಂದ ಎಂತಹ ವಿಪರ್ಯಾಸ ನೋಡಿ? ಸ್ವಾಮಿಗೆ ಇನ್ನೂ ಹೆಚ್ಚಿನ ಭಕ್ತ ಸಮೂಹ ಹರಿದು ಬರುತ್ತದೆ. ಮೂಢತನ, ಮುಗ್ಧತನದಿಂದ ಅಪಾಯದ ಅಂಚಿಗೆ ತಲುಪುತ್ತಿರುವ ಸಮಾಜವನ್ನು ಎಚ್ಚರಿಸಿದ್ದಾರೆ.

ಧರ್ಮಶೆಟ್ಟಿಯ ಮಗಳು 'ಕಾಮಾಕ್ಷಿ' ಪ್ರವಚನ ಕೇಳಲು ಹೋದಾಗ ಆಕೆಯ ಶೀಲ ಹಾಳಾಯಿತು. ಇದನ್ನು ಕಂಡ ತಂದೆ ಚಕಾರ ಎತ್ತದೆ ಸುಮ್ಮನಾದ. ಏಕೆಂದರೆ ಸಮಾಜದಲ್ಲಿ ಹೆಣ್ಣು ಶೀಲ ಕಳೆದುಕೊಂಡರೆ ಸಮಾಜ ನೀಡುವ ಗೌರವ ಎಂಥಹದು ಎಂದು ಹೆದರಿ ಸುಮ್ಮನಾಗುತ್ತಾನೆ. ಮುಂದೆ ಮೀನಾಕ್ಷಿ ಗುರುಗಳಲ್ಲಿ ಸನ್ಯಾಸ ದೀಕ್ಷೆಯನ್ನು ಪಡೆದುಕೊಳ್ಳುತ್ತಾಳೆ. 'ಬೇಲಿನೆ ಎದ್ದು ಹೊಲ ಮೇಯುವಾಗ ಅದನ್ನು ರಕ್ಷಿಸುವವರು ಯಾರು? ಎನ್ನುವ ಪ್ರಶ್ನೆ ಕಾಡುತ್ತದೆ.

ಎಂ.ಜಿ. ದೇಶಪಾಂಡೆಯವರು 'ಶ್ರಾವಣಿ' ಕಥಾ ಸಂಕಲನದ ಹಲವು ಕಥೆಗಳಲ್ಲಿ ಒಂದಾದ "ಒಂದು ಕ್ಷಣ" ಕಥೆ. ಈ ಕಥೆಯಲ್ಲಿ ಒಂದು ಹೆಣ್ಣಿನ ಸ್ವಾಭಿಮಾನದ ಜೀವನದಲ್ಲಿ ಬರುವ ದುಃಖ ದುಮ್ಮಾನಗಳು, ಆಕೆಯ ನೋವು-ನಲಿವುಗಳನ್ನು ಚಿತ್ರಿಸಿದ್ದಾರೆ.

ದಾರಿದ್ರ್ಯವನ್ನೇ ಬೆನ್ನಿಗೆ ಕಟ್ಟಿಕೊಂಡ ಹುಟ್ಟಿದ ಮಂಜುಳಾ ಚಿಕ್ಕವಳಿರುವಾಗಲೆ ತಾಯಿಯನ್ನು ಕಳೆದುಕೊಂಡವಳು. ತಂದೆ, ತಂಗಿಯರಿಂದ ಕೂಡಿದ ಕುಟುಂಬಕ್ಕೆ ಜವಬ್ದಾರಿಯನ್ನು ಹೊತ್ತ ಅಬಲೆ, ಬ್ಯಾಂಕಿನಲ್ಲಿ ಉದ್ಯೋಗ ದೊರೆಯುತ್ತದೆ. ತಂದೆಯನ್ನು ಕಳೆದುಕೊಳ್ಳುತ್ತಾಳೆ. ಹೀಗಿರುವಾಗ ದೊಡ್ಡಪ್ಪನ ಸಹಕಾರದಿಂದ ರವಿ ಎನ್ನುವ ಹುಡುಗನ ಜೊತೆ ಮಂಜುಳಾಳ ವಿವಾಹ ನೆರವೇರುತ್ತವೆ. ಅದಕ್ಕೂ ಮುಂಚೆ ತಂಗಿಯರ ವಿವಾಹವು ಸಹ ಮಾಡುತ್ತಾಳೆ. ಆದರೆ ರವಿ ಶಿಕ್ಷಕ ವೃತ್ತಿಯಲ್ಲಿದ್ದು ಸರಿಯಾದ ಕಾರ್ಯನಿರ್ವಹಿಸುತ್ತಿರುವಾಗ, ಕೆಟ್ಟ ಗೆಳೆಯರ ಸಹವಾಸದಿಂದ ಹಣದ ದುಂದುವೆಚ್ಚಕ್ಕೆ ಇಳಿಯುತ್ತಾನೆ. ನೌಕರಿ ಕಳೆದುಕೊಳ್ಳುತ್ತಾನೆ.

ಹಣದಾಸೆಯಿಂದ ಮಂಜುಳಾಳನ್ನು ಮದುವೆಯಾದ ಈಕೆಯ ಸಂಸಾರದಲ್ಲಿ, ಈಕೆಯ ಪಾತ್ರ ಗಂಡನಿಂದ ಶೋಷಣೆಗೆ ಒಳಗಾದವಳ ಪಾತ್ರ, ನಂತರ ಅದೇ ಬ್ಯಾಂಕಿನಲ್ಲಿ ವಿಜಯ ಅನ್ನುವ

ಪುರುಷನ ಪರಿಚಯವಾಗುತ್ತದೆ. ಇದರಿಂದ ಇವಳಿಗೆ ಸ್ವಲ್ಪ ಸಮಾಧಾನ, ಸಂತೋಷವು ಸಿಗುತ್ತದೆ. ಹೀಗಿರುವ ದಿನಗಳಲ್ಲೇ ವಿಜಯನ ಮದುವೆಯ ವಿಷಯ ತಿಳಿದು, ಮತ್ತೆ ಕಂಗಾಲಾಗಿ ನಿಂತಳು.

ಇವರ ಮತ್ತೊಂದು ಕಥೆ 'ದೀಪಾ' ಈ ಕಥೆಯಲ್ಲಿ ಹೆಣ್ಣಿನ ಅಸಾಯಕತೆಯನ್ನು ಚಿತ್ರಿಸಿದ್ದಾರೆ. ಹೆಣ್ಣು-ಗಂಡು ಎಂದು ಭೇದಭಾವ ಮಾಡಿ ಒಂದು ಹೆಣ್ಣಿನ ಬಾಳನ್ನೆ ಹಾಳು ಮಾಡಿದ್ದನ್ನು ಈ ಕಥೆಯಲ್ಲಿ ಚಿತ್ರಿಸಿದ್ದಾರೆ. ಮಗಳು ಅನ್ನುವದನ್ನು ಮರೆತು ದೀಪಾಳ ತಂದೆ-ತಾಯಿ ಅಮಾನವೀಯತೆಯ ವರ್ತನೆಯನ್ನು ಇಲ್ಲಿ ಚಿತ್ರಿಸಿದ್ದಾರೆ.

ದೀಪಾ ತಂದೆ-ತಾಯಿಯರ ಮನೆಯಲ್ಲಿ ಗಂಡು-ಹೆಣ್ಣು ಅನ್ನುವ ಶೋಷಣೆಯಲ್ಲಿ ಬೆಳೆದಳು. ತನ್ನ ಅಣ್ಣನನ್ನು ತಂದೆ-ತಾಯಿ ಪ್ರೀತಿಸಿದರು. ಆದರೆ ಆಕೆಯನ್ನು ಶೋಷಿಸುತ್ತಿದ್ದರು. ಆಕೆಯನ್ನು ವಯಸ್ಸಾದ ಭೈರಪ್ಪನಿಗೆ ಕೊಟ್ಟು ಮದುವೆ ಮಾಡುತ್ತಾರೆ. ಅತ್ತೆ ಮನೆಯಲ್ಲಿಯೂ ಆಕೆ ಗಂಡನ ಕಿರುಕುಳವನ್ನು ಸಹಿಸಿಕೊಳ್ಳಬೇಕಾಗುತ್ತದೆ. ತವರು ಮನೆಯಲ್ಲಿ ತಂದೆ-ತಾಯಿಯ ಶೋಷಣೆ ಗಂಡನ ಮನೆಯಲ್ಲಿಯು ಗಂಡನಶೋಷಣೆ, ಮತ್ತೆ ಗಂಡನ ಮರಣದ ನಂತರ ಮಗಳ ಜನನ, ಮತ್ತೆ ತಂದೆ-ತಾಯಿಯ ಕುತಂತ್ರ, ಆಕೆಯ ಅನಾರೋಗ್ಯ ಇದರ ಲಾಭಪಡೆದು ತಂದೆ-ತಾಯಿ ಆಸ್ತಿ-ಪಾಸ್ತಿಯನ್ನು ಕಂಡು ಅವಳ ಅಣ್ಣ ಮಲ್ಲೇಶನ ಜೊತೆ ಅವಳ ಮದುವೆ ಮಾಡುತ್ತಾರೆ.

ಇಲ್ಲಿ ದೀಪಾ ತಂದೆ-ತಾಯಿ, ಗಂಡನಿಂದ ಶೋಷಣೆಗೆ ಒಳಗಾಗಿ ಕೊನೆಗೆ ಜೀವನದಲ್ಲಿಯು ಆಸೆಯನ್ನು ಕಳೆದುಕೊಳ್ಳುತ್ತಾಳೆ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾ ಸಂಕಲನದಲ್ಲಿನ 'ಜಿಗುಪ್ಸೆ' ಕಥೆ ಇದಾಗಿದ್ದು, ಈ ಕಥೆಯಲ್ಲಿ ಬಾಲ್ಯವಸ್ಥೆಯಿಂದ ಹಿಡಿದು, ಮುಪ್ಪಾವಸ್ಥೆಯವರೆಗೂ ಹೆಣ್ಣಿನ ನೋವಿನ ಹಾಗೂ ಶೋಷಣೆಯ ಚಿತ್ರಣವನ್ನು ತೋರಿಸಿದ್ದಾರೆ. ರಮಾಬಾಯಿ ಪಾತ್ರದ ಮೂಲಕ ಬದುಕಿನ ಮೂರು ಕಾಲಘಟ್ಟವಾದ ಬಾಲ್ಯ, ಯೌವ್ವನ, ವೃದ್ಧಾಪ್ಯ ಇದರಲ್ಲಿಯ ಹೆಣ್ಣಿನ ನೋವು, ನಲಿವುಗಳನ್ನು ಇಲ್ಲಿ ಚಿತ್ರಿಸಿದ್ದಾರೆ.

ರಮಾಬಾಯಿಯ ತಂದೆ-ತಾಯಿಗೆ ಮಗಳ ಮದುವೆಯನ್ನು ನೋಡುವ ಆಸೆ, ಆ ಕಾರಣಕ್ಕಾಗಿ ಶ್ರೀಮಂತ ಮಗ ವೀರಕುಮಾರನಿಗೆ ಕೊಟ್ಟು ಮದುವೆಮಾಡುತ್ತಾರೆ. ಅತ್ತೆ ಮನೆಗೆ ಹೊಂದಿಕೊಳ್ಳುವ ಸಮಯದಲ್ಲಿಯೇ ಗಂಡನ ಮರಣವಾಗುತ್ತದೆ. ಆಕೆಯ ತಮ್ಮ ಶೇಖರ ಆಸ್ತಿ ಆಸೆಗಾಗಿ ರಮಾಬಾಯಿ ಮತ್ತು ಅತ್ತೆಗೆ ಪ್ರಾಣ ಬೆದರಿಕೆ ಹಾಕುತ್ತಾನೆ. ಆಸ್ತಿ ಇವನ ಹೆಸರಿಗೆ ಬರೆಯುತ್ತಾರೆ. ಮತ್ತೊಂದು ಕಥೆ ವಿಧಿಯ ಆಟದಂತೆ ರಮಬಾಯಿ ತಂಗಿ, ತಂಗಿಯ ಗಂಡ ಆತ್ಮಹತ್ಯೆ

ಮಾಡಿಕೊಳ್ಳುತ್ತಾರೆ. ಆ ಎರಡು ಮಕ್ಕಳನ್ನು ಸಾಕುವ ಜವಬ್ದಾರಿಯನ್ನು ರಮಾಬಾಯಿಗೆ ನೀಡುತ್ತಾರೆ. ಆ ಮಕ್ಕಳು ಬೆಳೆದು ದೊಡ್ಡವರು ಆದ ನಂತರ ರಮಾಬಾಯಿಯನ್ನು ಮನೆಯಿಂದ ಹೊರಹಾಕುತ್ತಾರೆ.

ಇವರ ಮತ್ತೊಂದ ಕಥೆ 'ನಾಗಲಕ್ಷ್ಮೀ' ಈ ಕಥೆಯಲ್ಲಿ ಒಂದು ಹೆಣ್ಣಿನ ಅಸಹಾಯಕತೆ ಆಕೆಯ ಮೇಲೆ ಬೀರಬಹುದಾದ ಪರಿಣಾಮಗಳು, ಗಂಡನನ್ನು ಕಳೆದುಕೊಂಡ ನಾಗಲಕ್ಷ್ಮಿ ಗೌಡನ ವಕ್ರ ದೃಷ್ಟಿಗೆ ಬಲಿಯಾಗುವ ಸಂದರ್ಭ, ಆಕೆಯ ಮನದ ತಳಮಳ, ಆಕೆಯ ಆಕ್ರೋಶಗಳನ್ನು ಇಲ್ಲಿ ಚಿತ್ರಿಸಿದ್ದಾರೆ.

ನಾಗಲಕ್ಷ್ಮೀ ಶಾಂತೂ ಇಬ್ಬರು ತುಂಬ ಪ್ರೀತಿಯಿಂದ ಜೀವನವನ್ನು ನಡೆಸುತ್ತಿದ್ದರು. ಗೌಡನ ಬಾವಿಯಲ್ಲಿ ಕೆಲಸ ಮಾಡುತ್ತಿದ್ದಾಗ ಶಾಂತುವಿನ ಪ್ರಾಣ ಪಕ್ಷಿ ಹಾರಿ ಹೋಗುತ್ತದೆ. ಇದನ್ನು ನೋಡಿದ ನಾಗಲಕ್ಷ್ಮೀಗೆ ಭೂಮಿಯೇ ಕುಸಿದಂತಾಗುತ್ತದೆ. ಗಂಡನನ್ನು ನೆನೆದು ಅಳುತ್ತಾಳೆ. ಗೌಡನ ವಕ್ರದೃಷ್ಟಿ ಈಕೆಯ ಮೇಲೆ ಬೀಳುತ್ತದೆ. ನಾಗಲಕ್ಷ್ಮೀ ಗೌಡನನ್ನು ಕೊಲ್ಲುವ ಪ್ರಯತ್ನ ಮಾಡುತ್ತಾಳೆ. ನಾಗಲಕ್ಷ್ಮೀಗೆ ಆರು ತಿಂಗಳು ಜೈಲು ಶಿಕ್ಷೆಯಾಗುತ್ತದೆ. ನಾಗಲಕ್ಷ್ಮೀ ಹುಚ್ಚಿಯಾಗುತ್ತಾಳೆ.

ಇದು ಒಂದು ಹೆಣ್ಣಿನ ಚಿಂತಾಜನ ಕಥೆ. ಪುರುಷ ಪ್ರಧಾನವಾದ ಸಮಾಜದಲ್ಲಿಯ ದಬ್ಬಾಳಿಕೆಯನ್ನು ಕಾಣುತ್ತೇವೆ.

ಎಂ.ಜಿ. ದೇಶಪಾಂಡೆಯವರ 'ಹೂ ಬಿಡದ ಗುಲಾಬಿ ಗಿಡ' ಕಥಾ ಸಂಕಲನದಲ್ಲಿ ಬರುವ ಕಥೆ 'ಕಳಂಕಿನಿ' ಈ ಕಥೆಯಲ್ಲಿ ಒಂದು ಹೆಣ್ಣಿನ ಚರಿತ್ರೆಗೆ ಭಂಗ ಬಂದರೆ ಸಮಾಜವು ಅವಳಿಗೆ ಕೊಡುವ ಸ್ಥಾನವನ್ನು ಕುರಿತು ಚಿತ್ರಿಸಿದ್ದಾರೆ.

ಮಾಧವಿಯ ಚಲುವನ್ನು ಪ್ರೀತಿಸಿ ಅವಳನ್ನು ಬಯಸಿದ್ದ ಸೋಮು, ಮಾಧವಿಯು ಅದಕ್ಕೆ ನಿರಾಕರಿಸಿದ್ದರಿಂದ ಆತ್ಮ-ಹತ್ಯೆ ಮಾಡಿಕೊಂಡನು. ಮುಂದೆ ತಂದೆ-ತಾಯಿಯನ್ನು ಸಹ ಕಳೆದುಕೊಂಡಳು. ಯಾರು ಇಲ್ಲದ ಈ ಅಬಲೆಗೆ ಸಮಾಜದಲ್ಲಿ ವೇಶ್ಯ ಎಂಬ ಸ್ಥಾನ ದೊರೆಯಿತು. ಕಳಂಕಿನಿಯಾದಳು ಆದರೂ ಶ್ರೀನಿವಾಸ ತನ್ನ ವಯಸ್ಸನ್ನು, ಅವಳ ಬಾಹ್ಯ ಸೌಂದರ್ಯವನ್ನು ಲೆಕ್ಕಿಸದೆ ಕೊನೆಗೆ ಮಾಧವಿಯ ಕೈ ಹಿಡಿದು ಅವಳಿಗೆ ಒಂದು ಸ್ಥಾನ ಕೊಡುತ್ತಾನೆ.

ಈ ಕಥೆಯಲ್ಲಿ ಒಂದು ಹೆಣ್ಣಿನ ಅಸಹಾಯಕತೆ ಅವಳನ್ನು ಯಾವ ರೀತಿ ವೇಶ್ಯ ಎಂಬ ಕೆಲಸಕ್ಕೆ ತೊಡಗಿಸಿಕೊಳ್ಳುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ಈ ಕಥಾಸಂಕಲನದಲ್ಲಿನ ಇವರ ಮತ್ತೊಂದು ಕಥೆ "ಹೂ ಬಿಡದ ಗುಲಾಬಿ ಗಿಡ" ಈ ಕಥೆಯಲ್ಲಿ ತನ್ನ ಕುಟುಂಬದ ಜವಬ್ದಾರಿಯನ್ನು ಹೊತ್ತ ಒಂದು ಹೆಣ್ಣಿನ ಚಿಂತಾಜನ ಸ್ಥಿತಿಯನ್ನು ಹೇಳಲಾಗದೆ ಸಮಾಜದಲ್ಲಿ ಒಂದು ಹೆಣ್ಣಿನ ಜವಬ್ದಾರಿ ಕುಟುಂಬಕ್ಕೆ ಎಷ್ಟು ಮುಖ್ಯವಾಗಿದೆ ಅದಕ್ಕೆ ಅವಳು ತನ್ನ ಪ್ರೀತಿಯನ್ನು ಸಹ ತ್ಯಾಗಮಾಡಲು ಸಿದ್ದಳಾಗಿರುವ, ಕೊನೆಗೆ ಪ್ರೀತಿಯಿಂದ ವಂಚಿತಳಾಗುವ ಅವಳ ಚಿಂತಾಜನಕ ಸ್ಥಿತಿ ಈ ಕಥೆಯ ಮೂಲಕ ಹೇಳಲಾಗಿದೆ.

ಸುಂದರ ಯುವತಿಯಾದ ರಮಣಿ ಕೌಟಂಬಿಕ ಜವಬ್ಧಾರಿಯಿಂದ ಅವಳ ಸೌಂದರ್ಯ ಸುಕ್ಕುಗಟ್ಟಿತ್ತು. ಇದರಿಂದ ಯಾವುದೇ ಗಂಡು ಬಂದರೂ ಅವಳನ್ನು ಮೆಚ್ಚುತ್ತಿರಲಿಲ್ಲ. ತನ್ನಿಂದ ತನ್ನ ತಂಗಿಯರ ವಿವಾಹ ನಿಂತುಹೋಗಬಾರದೆಂದು ಎಂದು ನಿರ್ಧರಿಸಿ ಕೊನೆಗೆ ತನಗೆ ಮದುವೆಯೇ ಬೇಡವೆಂದು ಯೋಚಿಸುತ್ತಾಳೆ. ಹೀಗಿರುವಾಗ ಹೆಚ್ಚಿನ ವಿದ್ಯಾಭ್ಯಾಸ ಮುಗಿಸಿದ್ದ ಇವಳು ಉಪನ್ಯಾಸಕಿಯಾಗಿ ಕಾಲೇಜಿನಲ್ಲಿ ಉದ್ಯೋಗ ಮಾಡುತ್ತಿರುವಾಗ ಶಂಕರನ ಪರಿಚಯವಾಗುತ್ತದೆ. ಶಂಕರನು ರಮಣಿಯನ್ನು ಮದುವೆಯಾಗುವುದಾಗಿ ಕೇಳಿದಾಗ, ರಮಣಿ ನನ್ನ ತಂಗಿಗೆ ನೀಲಾಂಜಲಿಗೆ ವಿವಾಹವಾಗಿ ಎಂದು ಹೇಳುತ್ತಾಳೆ. ಇಲ್ಲಿ ಅವಳು ತನ್ನ ಪ್ರೀತಿಯನ್ನು ತ್ಯಾಗಮಾಡುವ ಗುಣ ಕಂಡುಬರುತ್ತದೆ. ರಮಣಿಯ ಮಾತಿಗೆ ಶಂಕರನು ಒಪ್ಪುವುದಿಲ್ಲ. ತನ್ನನ್ನು ಸಹ ಪ್ರೀತಿಸುವರು ಈ ಜಗತ್ತಿನಲ್ಲಿದ್ದಾರೆಂದು ಸಂತೋಷಗೊಂಡ ರಮಣಿಗೆ ಅದೊಂದುದಿನ ಶಂಕರನ ಅಪಘಾತದ ಸುದ್ಧಿ ಬರುತ್ತದೆ. ಅವಳ ಕನಸ್ಸಿನ ಲೋಕಕ್ಕೆ ಯಾರೋ ಬೆಂಕಿ ಹಚ್ಚಿದಂತಾಗುತ್ತದೆ. ದಿನಾಲು ಅವಳ ಕೇಶಗಳಿಗೆ ಶೋಭೆಯಾಗುತ್ತಿದ್ದ ಗುಲಾಬಿ ಗಿಡದ ಹೂ ಅವತ್ತು ಬಿಟ್ಟಿರಲಿಲ್ಲ.

ಇವರ ಮತ್ತೊಂದು ಕಥೆ 'ಶ್ರಾವಣಿ' ಕಥಾ ಸಂಕಲನದಲ್ಲಿನ 'ಶ್ರಾವಣಿ' ಕಥೆ ಈ ಕಥೆ ಸತ್ಯ ಘಟನೆಯ ಆಧಾರಿತವಾದ ಕಥೆಯಾಗಿದೆ. ಯೌವನಾವಸ್ಥೆಯಲ್ಲಿ ಒಂದು ಹೆಣ್ಣು ದಾರಿ ತಪ್ಪಿದಾಗ ಆಕೆಗೆ ಸಮಾಜ ಕೊಡುವ ಬೆಲೆ, ಆಕೆಯ ಜೀವನ ಸಂಪೂರ್ಣವಾಗಿ ಅಂಧಕಾರದಲ್ಲಿ ಮುಳುಗಿರುವುದನ್ನು ಕಾಣುತ್ತೇವೆ. ಅಂತಹ ಪಾತ್ರ ರತ್ನಾಳದಾಗಿದೆ. ಯೌವ್ವನದಲ್ಲಿ ಮಾಡಿದ ತಪ್ಪಿನಿಂದಾಗಿ ಮುಪ್ಪಿನಾವಸ್ಥೆಯಲ್ಲಿ ಆಕೆಯು ನೋವನ್ನು ಅನುಭವಿಸಬೇಕಾಗುತ್ತದೆ.

ರತ್ನ ಸುಂದರವಾದ ಹೆಣ್ಣು ರಾಜಾಜಿ ಶಿಕ್ಷಕನಾಗಿರುತ್ತಾನೆ. ಈಕೆಯ ಅಂದವನ್ನು ಕಂಡು ವರದಕ್ಷಿಣೆ ಇಲ್ಲದೆ ಮದುವೆಯಾಗುತ್ತಾನೆ. ಈತ ಹಣ ಗಳಿಸುವದಕ್ಕಾಗಿ ದುಬಾಯಿಗೆ ಹೋಗುತ್ತಾನೆ. ಆಗ ಅವಳು ರಜನಿಕಾಂತ ಎಂಬ ಶ್ರೀಮಂತ ವ್ಯಕ್ತಿಯನ್ನು ಮೋಹಿಸುತ್ತಾಳೆ. ಇದನ್ನು ತಿಳಿದ ಅತ್ತೆಯನ್ನು ಕೂಡ ವಿಷ ಹಾಕಿ ಸಾಯಿಸುತ್ತಾಳೆ. ಐದು ವರ್ಷದ ನಂತರ ರಾಜಾಜಿ ಬಂದಾಗ ಶ್ರಾವಣಿ ಐದು ವರ್ಷದ ಮಗುವಾಗಿರುತ್ತಾಳೆ. ರತ್ನಾ ರಾಜಾಜಿಯ ಎದುರು ತಪ್ಪಿತಸ್ಥಳಾಗಿ ನಿಲ್ಲುತ್ತಾಳೆ. ತೊಟ್ಟಿಲಲ್ಲಿ ಮಗುವನ್ನು ತೆಗೆದುಕೊಂಡು ರತ್ನಾಳನ್ನು ತೊರೆದು ಹೋಗುತ್ತಾನೆ. ಮರು

ಮದುವೆಯಾಗದೆ ಬೇರೆ ಹೆಂಗಸಿನ ಸಹವಾಸಕ್ಕೂ ಹೋಗದೆ ಮಗಳನ್ನು ಬೆಳೆಸಿ ಭರ್ಜರಿಯಾಗಿ ಮದುವೆ ಮಾಡಿಕೊಡುತ್ತಾನೆ. ರಾಜಾಜಿಯನ್ನು ಮಗಳು ಅಳಿಯ ಆರೈಕೆ ಮಾಡುತ್ತಾರೆ. ತಂದೆಯ ಮರಣದ ನಂತರ ಸಂಪೂರ್ಣ ಆಸ್ತಿಯನ್ನು ತಮ್ಮನ ಹೆಸರಿಗೆ ಬರೆದುಕೊಟ್ಟು ಸಂಬಂಧವನ್ನು ಕಡೆದುಕೊಳ್ಳುತ್ತಾಳೆ ಶ್ರಾವಣಿ.

"ಜೀವನ ಮುಳ್ಳಿನ ಮೇಲೆ ಬಿದ್ದ ಬಟ್ಟೆ ಹಾಗೆ ಅದನ್ನು ಬುದ್ಧಿವಂತಿಕೆಯಿಂದ ಬಿಡಿಸಿದಾದರೆ ಬದುಕು ಉತ್ತಮವಾಗಿರುತ್ತದೆ. ಇಲ್ಲದಿದ್ದರೆ ಬದುಕು ಹರಿದ ಬಟ್ಟೆಯಾಗುತ್ತದೆ"

ಎಂ.ಜಿ. ದೇಶಪಾಂಡೆಯವರ 'ದೇವಯಾನಿ' ಕಥಾ ಸಂಕಲನದಲ್ಲಿನ 'ಗಜ್ರಿ' ಕಥೆಯಲ್ಲಿ ಒಂದು ಅಮಾಯಕ ಹೆಣ್ಣನ್ನು ನಂಬಿಸಿ ಆಕೆಯನ್ನು ಗರ್ಭಿಣಿಯಾಗಿ ಮಾಡಿದ ಗೌಡನ ಮಗನ ದಬ್ಬಾಳಿಕೆಗೆ ಮೋಸ ಹೋದ ಹೆಣ್ಣಿನ ಭಾವನೆಗಳ ಭಿನ್ನಪಗಳನ್ನು ಚಿತ್ರಿಸಿದ್ದಾರೆ. ಕೊನೆಗೆ ಆ ಹೆಣ್ಣು ಆತ್ಮಹತ್ಯೆಗೆ ಶರಣಾಗುತ್ತಾಳೆ.

ಲಿಂಬೆವ್ವ ಪೀರಪ್ಪನ ಮಗಳು 'ಗಜ್ರಿ'. ಸಾಮರಾಯ ಎಂಬ ಗೌಡನ ಮಗನಿಂದ ಮೋಸ ಹೋಗುತ್ತಾಳೆ. 'ಗಜ್ರಿ'ಯನ್ನು ಮೊದಲ ನೋಟದಲ್ಲಿ ಸಾಮರಾಯ ಆಕೆಯನ್ನು ಮೋಹಿಸುತ್ತಾನೆ. ದಿನದಿಂದ ದಿನಕ್ಕೆ ಆಕೆಗೆ ಹತ್ತಿರವಾಗುತ್ತಾನೆ. ಅದರ ಪರಿಣಾಮದಿಂದಾಗಿ ಆಕೆ ಗರ್ಭಿಣಿಯಾಗುತ್ತಾಳೆ. ವಿಷಯ ತಿಳಿದ 'ಗಜ್ರಿ'ಯ ತಂದೆ-ತಾಯಿ ಗೌಡನ ಮನೆಗೆ ಹೋದಾಗ ಗೌಡ ಅವರನ್ನು ಅವಮಾನ ಮಾಡಿ ಕಳಿಸುತ್ತಾನೆ. ಮನೆಗೆ ಬಂದಾಗ 'ಗಜ್ರಿ' ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾಳೆ. ಇದು ಅಮಾಯಕ ಹೆಣ್ಣಿನ ಕಥೆಯಾಗಿದೆ.

ಅದೇ ಕಥಾ ಸಂಕಲನದಲ್ಲಿನ 'ಹೆಜ್ಜೆಗಳು' ಕಥೆಯಲ್ಲಿ ಕಷ್ಟದಲ್ಲಿದ್ದ ಹೆಣ್ಣನ್ನು ಕೈಹಿಡಿದು ಆಕೆಯ ಬಾಳನ್ನು ಸರಿಮಾಡುವ ಪುರುಷ ಒಂದು ಕಡೆಯಾದರೆ, ಆಕೆಯ ಬಾಳನ್ನು ಅವನತಿಗೆ ತಳ್ಳಿದ ಮತ್ತೊಬ್ಬ ಪುರುಷನ ಕತೆ ಇಲ್ಲಿದೆ. ಇಲ್ಲಿ ಹೆಣ್ಣಿನ ಮೂಕವೇದನೆಯನ್ನು ಕಾಣುತ್ತೇವೆ.

ಅನುಪಾ ಮನು ಇಬ್ಬರು ಒಂದೇ ತರಗತಿಯಲ್ಲಿ ಓದುತ್ತಿರುತ್ತಾರೆ. ಅವರಿಬ್ಬರು ಹತ್ತಿರ ಬರುವ ಸಂದರ್ಭಗಳು ಬಹಳ ಕಡಿಮೆಯಾಗುತ್ತಿರುತ್ತವೆ. ಅವರಲ್ಲಿ ಪ್ರೀತಿ ಎನ್ನುವ ಸಂಚಿತ ಇರಲಿಲ್ಲ. ಆದರೂ ಅವರಲ್ಲಿ ಯಾವುದೋ ಒಂದು ಸಂಬಂಧ ಹೆಣೆದಿತ್ತು. ಅನುಪಾಳನ್ನು ಸುರೇಶನ ಜೊತೆ ಮದುವೆ ಮಾಡುತ್ತಾರೆ. ಸುರೇಶ ಕುಡುಕನಾಗಿರುತ್ತಾನೆ. ಕೊನೆಗೆ ರಕ್ತದ ಮಡುವಿನ ಮಧ್ಯ ಬಿದ್ದು ಅಲ್ಲಿಯೇ ಸಾವನ್ನಪ್ಪುತಾನೆ. ಅನುಪಾಳ ಬಾಳು ಕತ್ತಲಾಗುತ್ತದೆ. ಆಗ ಅಲ್ಲಿ ಮನೋಜ ಆಶಾಕಿರಣವಾಗಿ ಆಕೆಯ ಬಾಳಲ್ಲಿ ಪ್ರವೇಶಿಸುತ್ತಾನೆ. ಆತ ಸಮಾಜದಲ್ಲಿ ಮಾತ್ರ ಆಕೆಯ ಗಂಡನಾಗಿರುತ್ತಾನೆ.

ಇಲ್ಲಿ ಒಂದು ದಿನ ಮನು ಮನೆ ಬಿಟ್ಟುಹೋಗುವ ನಿರ್ಧಾರವನ್ನು ಮಾಡುತ್ತಾನೆ. ಆಗ ಆತ ಹೇಳಿದ ಮಾತು ಹೀಗಿದೆ, "ಈ ನಿನ್ನ ತನಿವಿಗೆ ಸುಖ ನೀಡಲಿಲ್ಲವೆಂದು ಮುನಿಸದಿರು, ನೀನು ನಿರ್ಮಲ ಆತ್ಮ ಆಗಬೇಕೆಂದಾಗ ಈ ನನ್ನ ಅಚಲ ನಿರ್ಧಾರವಿತ್ತು. ನನಗೆ ನಿನ್ನಪತಿ ಅರ್ಥಾತ ಸ್ವರ್ಗಸ್ಥ ಪತಿಯಾತ್ಮಕ್ಕೆ ದ್ರೋಹ ಬಗೆದಿಲ್ಲವೆಂದು ಮನಸ್ಸಿಗೆ ಶಾಂತಿಯಾಗಿದೆ. ನಿಜವಾಗಿ ನಿನಗೆ ನನ್ನಲ್ಲಿ ಪ್ರೀತಿ ಇದ್ದರೆ ಎಂದಿನಂತೆ ನಗು-ನಗುತ್ತಾ ಇರಬೇಕು. ಜೀವನವು ವಿಶಾಲವಾಗಿದ್ದರೆ ನಾನು ಮತ್ತೆಲ್ಲಿಯಾದರೂ ನಿನ್ನ ಸ್ಪಂದಿಸುವೆ"[೯] ಇಲ್ಲಿ ಅನುಪಾಳ ಬಾಳು ಒಂದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ದೇವಯಾನಿ ಕಥಾ ಸಂಕಲನದ ಮತ್ತೊಂದು ಇವರ ಕಥೆ 'ವೈಶಾಲಿ' ಈ ಕಥೆಯಲ್ಲಿ ಹೆಣ್ಣಿನ ಬಲಿದಾನ ತ್ಯಾಗದ ಬದಲಾಗಿ ಆಕೆಗೆ ದೊರೆತಿದ್ದು ಕೇವಲ ನೋವು ಹತಾಶಯ ಆಕೆಯ ತ್ಯಾಗಕ್ಕೆ ಯಾವುದೇ ಅರ್ಥ ಇಲ್ಲದ ಹಾಗೆ ಮಕ್ಕಳು ಅವಳನ್ನು ವೃದ್ಧಾಶ್ರಮಕ್ಕೆ ಕಳುಹಿಸುತ್ತಾರೆ.

ಇಲ್ಲಿ ಬರುವ ಪಾತ್ರಗಳು ಶಾಮ, ಸೀತಾ, ಮಧು, ಗೋಪಾಲ, ಶಾರದೆ, ಕಲಾ, ವೈಶಾಲಿ ಈ ಕಥೆಗಳಲ್ಲಿ ಮೂಡಿಬಂದ ಪಾತ್ರಗಳು. ಶಾಮ, ನೇತಾರ ಮಕ್ಕಳು, ಮಧು, ಗೋಪಾಲ, ಸೀತಾ ಹೇರಿಗೆಯ ಸಮಯದಲ್ಲಿ ಸಾವನ್ನಪ್ಪುತ್ತಾಳೆ. ಗೋಪಾಲ, ಮಧು, ಶಾರದೆ ಈ ಮೂವರು ಮಕ್ಕಳು ಶಾಮನ ಮಕ್ಕಳಾಗಿದ್ದವು. ಸೀತೆಯ ಮರಣಾನಂತರ 'ಕಲಾ' ಸ್ವಲ್ಪ ದಿನ ಶಾಮನ ಮನೆಯ ಜವಾಬ್ದಾರಿಯನ್ನು ನೋಡಿಕೊಳ್ಳುತ್ತಾಳೆ. 'ಕಲಾ'ಗೆ ಬೇಸರವಾದಾಗ ಶಾಮನಿಗೆ ಮರುಮದುವೆಯಾಗು ಎಂದು ಸಲಹೆ ನೀಡುತ್ತಾಳೆ. ಆಕೆಯ ಸ್ನೇಹಿತೆ ವೈಶಾಲಿಯ ಹೆಸರನ್ನು ಪ್ರಸ್ತಾಪಿಸುತ್ತಾಳೆ. ಅದರಂತೆ ಶಾಮ, ವೈಶಾಲಿಯ ಕೈ ಹಿಡಿಯುತ್ತಾನೆ. ವೈಶಾಲಿಯ ಲಾಲನೆ-ಪಾಲನೆಯಲ್ಲಿ ಬೆಳೆದು ದೊಡ್ಡವರಾಗುತ್ತಾರೆ. ಒಂದು ದಿನ ಶಾರದೆಗೆ ಗಂಡು ನೋಡಲು ಮನೆಗೆ ಬಂದಾಗ ಶಾಮನ ಸಾವಿನ ಸುದ್ದಿ ಬರುತ್ತದೆ. ಶಾಮ ಸತ್ತ ದಿನದಿಂದ ವೈಶಾಲಿಯ ಭಾಗ್ಯವೆಲ್ಲ ಕರಗಿಹೋಯಿತು. ಗಂಡು-ಮಕ್ಕಳಿಗೆ ಮದುವೆ ಮಾಡಿದಳು. ಸೊಸೆಯರು ಅವಳನ್ನು ಚೆನ್ನಾಗಿ ನೋಡಿಕೊಳ್ಳಲಿಲ್ಲ. ಕೊನೆಗೆ ಅವಳನ್ನು ವೃದ್ಧಾಶ್ರಮಕ್ಕೆ ಸಾಗಿಸುವದಕ್ಕೆ ವ್ಯವಸ್ಥೆ ಮಾಡುತ್ತಾರೆ. ವೈಶಾಲಿ ವಿಧಿ ಇಲ್ಲದೆ ಒಪ್ಪಿಕೊಳ್ಳುತ್ತಾಳೆ.

---

೯. ದೇವಯಾನಿ 'ಹೆಜ್ಜೆಗಳು' ಕತೆಗಾರರು ಎಂ.ಜಿ.ದೇಶಪಾಂಡೆ ಪುಟ ಸಂಖ್ಯೆ . ೬೪

ಎಂ.ಜಿ. ದೇಶಪಾಂಡೆಯವರ 'ಪಾರಿಜಾತ' ಕಥಾ ಸಂಕಲನದ 'ಚಾಂದಿನಿ' ಈ ಕಥೆ ಕಿರುಚಿತ್ರವಾಗಿ ಪ್ರಕಟಗೊಂಡಿದೆ. ಇಲ್ಲಿ ಒಂದು ಹೆಣ್ಣಿನ ಲೈಂಗಿಕ ಕಿರುಕುಳದಿಂದ ಆಕೆಯ ಜೀವವನ್ನೆ ನುಂಗುವ ದುಷ್ಟ ಮೃಗಗಳ ಚಿತ್ರಣ ಇಲ್ಲಿದೆ. ಸಮಾಜದಲ್ಲಿ ಎಂದಿನವರೆಗೂ ಇಂತಹ ಮೃಗಗಳು ಇರುವರು, ಅಲ್ಲಿಯವರೆಗೂ ಈ ಹೆಣ್ಣಿನ ಶೋಷಣೆ ತಪ್ಪಿದ್ದಲ್ಲ.

ಚಾಂದಿನಿ ಸೈಯದ ರಿಕ್ಷಾಚಾಲಕನ ಪತ್ನಿಯಾಗಿದ್ದಳು. ಇಬ್ಬರು ಪ್ರೀತಿಯಿಂದ ಬಾಳುತಿದ್ದರು. ಚಾಂದಿನಿ ವಿದ್ಯಾವಂತೆಯಾದರೂ ಕೂಡ ಹೊರಗಡೆ ಕೆಲಸ ಮಾಡುತ್ತಿರಲಿಲ್ಲ. ಗಂಡನ ಆಜ್ಞೆಯಂತೆ ನಡೆದುಕೊಳ್ಳುತ್ತಿದ್ದಳು. ಅವರಿಗೆ ಎರಡು ಗಂಡು, ಎರಡು ಹೆಣ್ಣು ಮಕ್ಕಳು ಸಂಸಾರ ಭಾರವಾಗತೊಡಗಿತ್ತು. ಸೈಯದ ಮಧ್ಯ ಸೇವಿಸತೊಡಗಿದ್ದ. ದಿನಗಳು ಉರುಳಿದಂತೆ ಬಡತನದಿಂದ ಚಾಂದಿನಿ ತಾನು ದುಡಿಯುವುದು ಅನಿವಾರ್ಯ ಎಂದು ದುಡಿಯುವುದಕ್ಕೆ ಹೊರನಡೆದಳು. ಕೆಲಸ ಮಾಡುವಲ್ಲಿ ಯಜಮಾನ ಆಕೆಯನ್ನು ಮೋಹಿಸಿದ. ಅಂದು ರಾತ್ರಿ ಆ ಯಜಮಾನನಿಂದ ತಪ್ಪಿಸಿಕೊಂಡು ಬಂದಳು. ಎರಡು ದಿವಸಗಳ ನಂತರ ಸೈಯದ ಯಜಮಾನನ ಜೊತೆ ಮನೆಗೆ ಬಂದ ಗಂಡ ಸೈಯದನ ದುಷ್ಟತನಕ್ಕೆ ನೊಂದು ಆತ್ಮ ಹತ್ಯೆಗೆ ಶರಣಾಗುತ್ತಾಳೆ.

ಹೆಣ್ಣಿನ ರಕ್ಷಣೆ ಬಾಲ್ಯದಲ್ಲಿ ತಂದೆ-ತಾಯಿ, ಯೌವ್ವನದಲ್ಲಿ ಗಂಡ, ಮುಪ್ಪಿನಾವಸ್ಥೆಯಲ್ಲಿ ಮಕ್ಕಳು ಎಂದು ಹೇಳಿದ್ದು ಇದು ತಪ್ಪು ಅನಿಸುತ್ತದೆ. ಹೆಣ್ಣಿಗೆ ರಕ್ಷಣೆ ಇಲ್ಲ ಅನಿಸುತ್ತದೆ. ಇಂದಿನ ಸಮಾಜದಲ್ಲಿ.

ಇದೇ ಕಥಾಸಂಕಲನದಲ್ಲಿನ ದೇಶಪಾಂಡೆಯವರ ಮತ್ತೊಂದು ಕಥೆ 'ಬಾಳಿನೊಳಗಿನ ರಹಸ್ಯ' ಹೆಣ್ಣಿಗೆ ಮದುವೆಯಾಗದಿದ್ದರೂ ಸಮಸ್ಯೆ, ಮದುವೆಯಾದರೂ ಸಮಸ್ಯೆ ಹತ್ತು ಹಲವು ಸಮಸ್ಯೆಗಳು ಎದುರಾಗುತ್ತವೆ. ಇಂತಹ ಸಮಸ್ಯೆಗೆ ಸಿಕ್ಕಿ ದಾರಿ ಇಲ್ಲದೆ ಹೊರಟಳು ಸಂಗೀತಾ.

ಸಂಗೀತಾಳನ್ನು ನೋಡಲು ಬರುವವರು ಆಕೆಯ ಬಾಹ್ಯ ಸೌಂದರ್ಯವನ್ನು ಸವೆದು ಹೋಗುತ್ತಿದ್ದರು. ಅವರ ಮನೆಯಲ್ಲಿ ಅಕ್ಕನ ಮಗ ಪ್ರಕಾಶ ಇರುತ್ತಿದ್ದ. ಸಂಗೀತಾಳನ್ನು ಪ್ರೀತಿಸುತ್ತಿದ್ದ. ಒಂದು ರಾತ್ರಿ ಈಕೆಯನ್ನು ಬಲಾತ್ಕರಿಸಲು ಪ್ರಯತ್ನಿಸಿದ. ಅಂದಿನಿಂದ ಗಂಡಸರ ಬಗ್ಗೆ ಸಂಗೀತಾಳಿಗೆ ಜಿಗುಪ್ಸೆ ಉಂಟಾಯಿತು. ನಂತರ ಸಂಗೀತಾಳಿಗೆ ಉಮೇಶನ ಜೊತೆ ವಿವಾಹವಾಯಿತು. ಉಮೇಶ ಸುಖ ಪುರುಷನಾಗಿದ್ದನು. ಈತನ ತಂದೆ ಕಾಶೀರಾಯ ಸಂಗೀತಾಳನ್ನು ಬಲತ್ಕಾರ ಮಾಡಲು ಪ್ರಯತ್ನಿಸಿದನು. ಇದನ್ನು ಸಹಿಸದ ಸಂಗೀತಾ ಮನೆ ಬಿಟ್ಟು ನಡೆದಳು. ಹೆಣ್ಣಿಗೆ ರಕ್ಷಣೆ ನೀಡುವರು ಯಾರು?

ಎಂ.ಜಿ.ದೇಶಪಾಂಡೆಯವರ 'ಪಾರಿಜಾತ' ಕಥಾ ಸಂಕಲನದಲ್ಲಿನ 'ಅವಳು' ಒಂದು ಕಥೆಯಾಗಿದೆ. ಈ ಕಥೆಯಲ್ಲಿ ಒಬ್ಬ ವಿಧವೆಯನ್ನು ಸಮಾಜ ನೋಡುವ ದೃಷ್ಟಿಕೋನವನ್ನು ಚಿತ್ರಿಸಿದ್ದಾರೆ.

ರವಿ ವಿಧವೆಯನ್ನು ಕಂಡು ಈಕೆಯನ್ನು ಪಡೆಯಬೇಕೆಂಬ ಹಂಬಲ ಹುಟ್ಟುತ್ತದೆ. ರವಿ ಆಕೆಯ ಪಕ್ಕದ ಮನೆಯಲ್ಲಿ ಬಾಡಿಗೆಗೆ ಬರುತ್ತಾನೆ. ಮಗುವನ್ನು ಹಚ್ಚಿಕೊಳ್ಳುತ್ತಾ ಆಕೆಯ ಹತ್ತಿರ ಇರಲು ಪ್ರಯತ್ನಿಸುತ್ತಾನೆ. ಒಂದು ದಿನ ಆ ವಿಧವೆ ರವಿಯನ್ನು ಬೇಡಿಕೊಳ್ಳುತ್ತಾಳೆ. ಅಣ್ಣ ನೀವು ಪದೇ ಪದೇ ಮನೆಗೆ ಬರಬೇಡಿ ಜನರು ಈಗಾಗಲೇ ನನ್ನ ಬಗ್ಗೆ ಕೆಟ್ಟದಾಗಿ ಮಾತನಾಡುತ್ತಿದ್ದಾರೆ. ಎಂದಾಗ ರವಿಯ ಬಾಯಿಯಿಂದ ಮಾತೆ ಹೊರಡಲಿಲ್ಲ.

<u>ಪ್ರೀತಿ ಪ್ರಣಯ:-</u>

ಪ್ರೀತಿಯ ಮೀಮಾಂಸೆ ಎಂಬ ಲಲಿತ ಪ್ರಬಂಧದಲ್ಲಿ ಪ್ರೋ॥ ವಿರೇಂದ್ರ ಸಿಂಪಿ ಹೀಗೆ ಹೇಳಿದ್ದಾರೆ. ಪ್ರೀತಿಗೆ ಸಮಾನವಾದ ಜೀವನ ಮೌಲ್ಯ ಇನ್ನೊಂದಿಲ್ಲ. ಪ್ರೀತಿಯಿಲ್ಲದ ಜೀವನ ಅದೊಂದು ಜೀವನವಲ್ಲ. ಪ್ರೀತಯನ್ನು ಸ್ಥಾಯಿ ಭಾವ ಎಂದು ಕರೆಯುತ್ತಾರೆ. ಪ್ರೀತಿಗೆ ಇನ್ನೊಂದು ತಳಹದಿ ತ್ಯಾಗವಾಗಿದೆ.

'ಪ್ರೀತಿಯ ಮೀಮಾಂಸೆ'ಯಲ್ಲಿ ಪ್ರೀತಿಯ ಬಗ್ಗೆ ಪ್ರೋ॥ ವೀರೆಂದ್ರ ಸಿಂಪಿ ಒಂದ ಸುಂದರ ಪುಟ್ಟ ದಂಪತಿಗಳ ಕತೆಯನ್ನು ಅವರು ವಿಶ್ಲೇಷಿಸಿದ್ದಾರೆ. ಓ ಹೆನ್ರಿ ಪ್ರೀತಿಯ ಈ ಅಮರ ಸಂದೇಶವನ್ನು ಸಾರುವ ಕ್ರಿಸ್ಮಸ್ ಕಾಣಿಕೆ' ಯೆಂಬ ಸುಂದರ ಕಥೆಯನ್ನು ರಚಿಸಿದ್ದಾನೆ. "ಜೇಮ್ ಹಾಗೂ ಡೇಲಾ ಪುಟ್ಟ ದಂಪತಿಗಳು ಅವರಿಗೆ ಒಲವೆ ಸಂಪತ್ತು ಅದನ್ನೇ ಅವರು ಎಲ್ಲದಕ್ಕೂ ಬಳಸಿದ್ದಾರೆ. ಬಹುಚಿಕ್ಕ ವಯಸ್ಸಿನಲ್ಲೇ ಸಂಸಾರದ ಬಹು ಭಾರ ಹೊತ್ತ ಪತಿಯ ಬಗ್ಗೆ ಸತಿಗೆ ಮರುಕ. ಅವನಿಗೆ ನನ್ನಾದರೂ ಕ್ರಿಸ್ಮಸ್ ಹಬ್ಬಕ್ಕಾಗಿ ಬೆಲೆಯುಳ್ಳ ಕಾಣಿಕೆ ಕೊಡಬೇಕೆನ್ನುವುದು ಅವಳ ಮನದಾಸೆ. ಅದಕ್ಕಾಗಿ ವರ್ಷದುದ್ದಕ್ಕೂ ಸಂಸಾರದ ವೆಚ್ಚದಲ್ಲಿ ಮಿತವ್ಯಯ ಮಾಡಿ ಕೆಲಚಿಲ್ಲರೆ ನಾಣ್ಯಗಳನ್ನೇನೋ ಉಳಿಸಿದ್ದಾಳೆ. ಎಷ್ಟು ಸಾರಿ ಎಣಿಸಿದರೂ ಅವಳ ಉಳಿತಾಯದ ಹಣ ೧ ಡಾಲರ ಹಾಗೂ ೮೭ ಸೆಂಟ್ಸಗಳನ್ನು ಮೀರಲಿಲ್ಲ. ಅತ್ತಿಂದಿತ್ತು ಇತ್ತಿಂದತ್ತ ರೂಮಿನಲ್ಲೆಲ್ಲ ಸುಳಿದಾಡಿದಳು. ಕೊನೆಗೆ ಕೋಣೆಯಲ್ಲಿಯ ನಿಲುವಗನ್ನಡಿಯ ಮುಂದೆ ನಿಂತು ತನ್ನ ಅಪಾರ ಕೇಶರಾಶಿಯನ್ನು ನಿರೀಕ್ಷಿಸಿದಳು, ಅವಳ ಮನದಲ್ಲೇನೋ ಹೊಳೆಯಿತು. ಕಣ್ಣುಗಳು ಮಿಂಚಿದವು. ಅದೇ ಕ್ಷಣದಲ್ಲಿ ಅವಳು ಪೇಟೆಗೆ ಶಬ್ದಶಃ ಓಡಿದಳು. ಇಪ್ಪತ್ತು ಡಾಲರಗಳಿಗೆಲ್ಲ ತನ್ನ ಕೂದಲು ಮಾರಿದಳು. ಹತ್ತೆಂಟು ಅಂಗಡಿಗಳನ್ನು ತಿರುವಿ ಹಾಕಿ ಕೊನೆಗೆ ಜೇಮ್‌ನ ಕೈಗಡಿಯಾರಕ್ಕೆ ಒಪ್ಪುವಂತಹ ಬಂಗಾರದ ಚೈನನ್ನು ಖರೀದಿಸಿದಳು. ಮತ್ತೆ ಹೆಮ್ಮೆಯಿಂದ ಮನೆಗೆ ಮರಳಿದಳು. ಏಳು ಗಂಟೆಗೆ ಜೇಮ್‌ನಿಗಾಗಿ ಅಡಿಗೆಮಾಡಿ ಕಾದು

ಕುಳಿತಳು. ಅಂದು ರಾತ್ರಿ ಜೇಮ್ ತಡಮಾಡಿ ಬಂದ. ಅವಳತ್ತ ಕಣ್ಣು ಬಡಿಯದೆ ದಿಟ್ಟಿಸಿ ನೋಡುತ್ತ ನಿಂತ' ಅಯ್ಯೋ ಡೇಲಾ ನಿನ್ನ ಕೂದಲೆಲ್ಲಿ ಹೋಯ್ತೋ ಎಂದು ಗೋಳಾಡಿದ. ಡೇಲಾ ತನ್ನ ಕೂದಲು ತುಂಬ ವೇಗವಾಗಿ ಬೆಳೆಯುವದೆಂದು ತಾನು ಮೊದಲಿನಂತೆ ಸುಂದರವಾಗಿ ಕಾಣಿಸುತ್ತೇನೆಂದು ಆಶ್ವಾಸನೆಕೊಟ್ಟಳು. ತಾನು ತಂದ ಕೈಗಡಿಯಾರದ ಚೈನು ಜೇಮ್‌ನತ್ತ ಎತ್ತಿ ಹಿಡಿದಳು. ಆಗ ಜೇಮ್‌ನು ಏನನ್ನು ಹೇಳದೇ ತನ್ನ ಕೋಟಿನ ಜೇಬಿನೊಳಗಿದ್ದ ಸುಂದರವಾದ ಕೇಶಾಲಂಕಾರವನ್ನು ಅವಳ ಕೈಯಲ್ಲಿತ್ತ. ತನ್ನ ಕೈಗಡಿಯಾರ ಮಾರಿ ಈ ಕೇಶಲಂಕಾರ ತಂದೆನೆಂದು ಹೇಳಿಕೊಂಡ. ಈ ರೀತಿ ಮುಟ್ಟ ದಂಪತಿಗಳಿಬ್ಬರು ಪರಸ್ಪರರಿಗಾಗಿ ಅದ್ಭುತ. ಆದರೆ ನಿರರ್ಥಕ ಕಾಣಿಕೆಗಳನ್ನು ತಂದು ತಮ್ಮ ವೃತ್ತಿಯ ಅರ್ಥಾತ ತ್ಯಾಗದ ಆಳವನ್ನು ವ್ಯಕ್ತಪಡಿಸಿದರು"[೧೦]

ಎಂಥಹ ಓದುಗನ ಮನಸ್ಸನ್ನು ತನ್ನ ಕಡೆಗೆ ಸೆಳೆದುಕೊಳ್ಳುವ ಕಥೆಯಾಗಿದೆ. ಇಂತಹ ಕೆಲವು ಕಥೆಗಳಲ್ಲಿ ವಿಭಿನ್ನ ರೀತಿಯ ಕಥೆಗಳನ್ನು ಕಾಣುತ್ತೇವೆ. ದುಪ್ಪರ ಒಂದು ಲೋಕ ಆದರೆ, ಪ್ರೇಮಿಗಳದೇ ಒಂದು ಲೋಕವಾಗುತ್ತದೆ. ಪ್ರೇಮಕ್ಕೆ ನೂರಾರು ಅಡೆತಡೆಗಳನ್ನು ಕಾಣುತ್ತೇವೆ. ಒಂದು ವರ್ಗ, ಇನ್ನೊಂದು ಕುಟುಂಬದ ಪ್ರತಿಷ್ಠೆ ಇತ್ಯಾದಿ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾಸಂಕಲನದಲ್ಲಿನ 'ಶಾಂತಿ' ಕಥೆಯಲ್ಲಿ ಪ್ರೀತಿಯ ಮತ್ತೊಂದು ರೂಪವೇ ತ್ಯಾಗ ಎನ್ನುವುದನ್ನು ಶಾಂತಿಯ ಪಾತ್ರದ ಮೂಲಕ ತೋರಿಸಿದ್ದಾರೆ. ಶಾಂತಿ ಬಾಲ್ಯದಿಂದಲೂ ಪ್ರೀತಿಸಿದ ಹುಡುಗ, ಆದರೆ ಅವನು ಬೆಳೆದು ದೊಡ್ಡವನಾದ ಮೇಲೆ ಉನ್ನತ ವ್ಯಾಸಂಗ ಮಾಡಿ ಕಾಲೇಜಿನಲ್ಲೆ ರೂಪಾ ಎನ್ನುವ ಹುಡುಗಿಯ ಪರಿಚಯವನ್ನು ಮಾಡಿಕೊಂಡು ಆಕೆಯನ್ನು ವಲಿಸುತ್ತಾನೆ. ಒಂದು ದಿನ ಶಾಂತಿಯ ಪತ್ರವನ್ನು ಓದಿದ ರೂಪಾ ಗಂಡನ ಮೇಲೆ ಸಂಶಯ ಪಡುತ್ತಾಳೆ. ಮೈಗೆ ಬೆಂಕಿ ಹಂಚಿಕೊಂಡು ಸಾಯಲು ಸಿದ್ಧಳಾದಾಗ ಆಕೆಯ ಗಂಡ ಆಸ್ಪತ್ರೆಗೆ ಸೇರಿಸುತ್ತಾನೆ. ನೈಜತೆ ರೂಪಾಳಿಗೆ ಆವಾಗ ತಿಳಿಯುತ್ತದೆ.

ದೇಶಪಾಂಡೆಯವರ 'ಪಾರಿಜಾತ' ಕಥಾಸಂಕಲನದಲ್ಲಿ ಬರುವ 'ಜಾತಿ ಅರಿಯದ ಪ್ರೀತಿ' ಒಂದು ಕಥೆಯಾಗಿದೆ. ಈ ಕಥೆಯಲ್ಲಿ ರಮಾ ಅಂತರಜಾತಿ ಹುಡುಗನನ್ನು ಪ್ರೀತಿಸುತ್ತಾಳೆ. ಇದನ್ನು ತನ್ನ ತಂದೆಯ ಹತ್ತಿರ ಹೇಳಲಾರದೆ ಸುಮ್ಮನೆ ಇದ್ದಳು. ತಂದೆ ಆಕೆಯ ಡೈರಿಯನ್ನು ಓದಿದಾಗ ಜಾನಸನ್ ಅನ್ನುವ ಹುಡುಗುನ ಬಗ್ಗೆ ಗೊತ್ತಾಗುತ್ತದೆ. ತಂದೆ ಜಾನಸನ್ ಅನ್ನುವ ಹುಡುಗನನ್ನು ಮನೆಗೆ ಕರೆತರುತ್ತಾರೆ. ಇಲ್ಲಿ ಜಾತಿಗಿಂತ ಪ್ರೀತಿಯೇ ದೊಡ್ಡಾಗಿರುತ್ತದೆ.

---

೧೦. ಆಯ್ದು ಲಲಿತ ಪ್ರಬಂಧಗಳು ಸಂಪಾದಕರು ಶ್ರೀಮತಿ ಜಗದೇವಿ ತೀಲಿ ಪ್ರೀತಿಯಮೀಮಾಂಸೆ ಲೇಖಕರು ಪ್ರೊ ವೀರೇಂದ್ರ ಸಿಂಪಿ ಪುಟ ಸಂಖ್ಯೆ ೩೨

ಎಂ.ಜಿ. ದೇಶಪಾಂಡೆಯವ 'ದೇವಯಾನಿ' ಕಥಾಸಂಕಲನದಲ್ಲಿ ಮೂಡಿ ಬಂದ ಕಥೆ 'ಫಲಿತಾಂಶ' ಈ ಕಥೆಯಲ್ಲಿ ಪ್ರೀತಿಸಿದ ಜೀವಿಗಳು ಪರಸ್ಪರರು ಒಂದಾದ ಕಥೆಯಾಗಿದೆ. ಕಥೆಯು ತುಂಬಾನೆ ಸರಳ ಮತ್ತು ಸಾಮಾನ್ಯವಾದದ್ದು ಮತ್ತು ಸಿನಿಮಾ ರೀತಿಯ ಕಥೆಯಾಗಿದೆ.

ರವಿ, ಮಂಜುಳಾಳ ಮನೆಯಲ್ಲಿ ಬಾಡಿಗೆಗೆ ಬರುತ್ತಾನೆ. ಮಂಜುಳಾನ ತಾಯಿ ತನ್ನ ಮನೆಯ ನೋವೆಲ್ಲ ರವಿಯ ಮುಂದೆ ತೋಡಿಕೊಳ್ಳುತ್ತಾಳೆ. ಮಂಜುಳಾ ಓದಿನಲ್ಲಿ ಚುರುಕಾಗಿರುತ್ತಾಳೆ. ಎಸ್.ಎಸ್.ಎಲ್.ಸಿ. ವರೆಗೂ ಓದಿ, ಓದಲ್ಲಿಗೆ, ಸ್ಥಗಿತಗೊಳಿಸುತ್ತಾಳೆ. ಮನೆಯನ್ನು ಅಚ್ಚುಕಟ್ಟಾಗಿ ನೋಡಿಕೊಳ್ಳುತ್ತಾಳೆ. ಬೆಳಿಗ್ಗೆ ವೇಳೆ ಮನೆಯ ಫ್ಯೂಜನ್ನು ತೆಗೆದು ರಾತ್ರಿ ವೇಳೆ ಹಾಕುವುದು ವಾಡಿಕೆ. ಹೀಗೆ ಜೀವನ ನಡೆಯುವಾಗ ಮಂಜುಳಾಗೆ ರವಿಯ ಮೇಲೆ ಪ್ರೀತಿ ಹುಟ್ಟುತ್ತದೆ. ರವಿ ಕೂಡ ಆಕೆಯನ್ನು ಮೆಚ್ಚಿಸುತ್ತಾನೆ. ಒಂದು ದಿನ ರವಿ ಪ್ರೀತಿಯ ವಿಷಯ ಮಂಜುಳಾಗೆ ಹೇಳಿದಾಗ ಜ್ಞಾನತಪ್ಪಿ ಬೀಳುತ್ತಾಳೆ. ನಂತರ ಆಸ್ಪತ್ರೆಗೆ ಸೇರಿಸಿದಾಗ ಈ ವಿಷಯ ಕೇಳಿ ಆಶ್ಚರ್ಯವಾಯಿತು ಎಂದು ಹೇಳಿಕೊಳ್ಳುತ್ತಾಳೆ. ನಂತರ ಆಸ್ಪತ್ರೆಯಲ್ಲಿಯೇ ಇಬ್ಬರ ಮದುವೆಯಾಗುತ್ತದೆ.

ಇವರ ಮತ್ತೊಂದು ಕಥೆ 'ವಸಂತ ಬಂದಾಗ' ಈ ಕಥೆಯಲ್ಲಿ ಬತ್ತಿ ಹೋದ ಪ್ರೀತಿ ಮತ್ತೆ ಎದುರು ಬಂದು ನಿಂತಾಗ ಅವರಲ್ಲಿ ಉಂಟಾಗುವ ಭಾವನೆಗಳ ಹೊಯ್ದಾಟವನ್ನು ಇಲ್ಲಿ ಚಿತ್ರಿಸಿದ್ದಾರೆ. ಚೈತ್ರ ವಸಂತನನ್ನೆ ಮದುವಯಾಗುವುದಾಗಿ ಹಟ ಹಿಡಿದಾಗ ಆಗ ವಸಂತ ದೆಹಲಿಗೆ ಹೋಗುತ್ತಾನೆ. ಚೈತ್ರಾಳ ತಂದೆ ಅವಳಿಗೆ ವಸಂತ ಬರುವಿಗಾಗಿ ಒಂದು ದಿನಾಂಕ ನೀಡುತ್ತಾರೆ. ಬರಲಿಲ್ಲ ಅಂದರೆ ಶ್ರೀಕಾಂತನು ಮದುವೆಯಾಗಬೇಕು ಎಂದು ಹೇಳುತ್ತಾರೆ. ಕೊನೆಗೆ ವಸಂತ ಬರುವುದಿಲ್ಲ. ಚೈತ್ರಾಳ ಮದುವೆ ನಡೆಯುತ್ತದೆ. ಅವಳು ಮದುವೆಯಾದ ಮರುದಿನ ವಸಂತ ಬರುತ್ತಾನೆ. ಆಕಾಶವೆ ಕಳಚಿಬಿದ್ದ ಹಾಗೆ ಅನಿಸುತ್ತದೆ. ಒಂದು ದಿನ ವಸಂತ ಶ್ರೀಕಾಂತನ ಮನೆಗೆ ಬಂದಾಗ ಅವಳನ್ನು ನೋಡಿ ಆಶ್ಚರ್ಯ ಚಕಿತನಾಗಿ ದೇವರನ್ನು ಶಪಿಸುತ್ತಾ ಮುಂದೆ ನಡೆಯುತ್ತಾನೆ.

ಎಂ.ಜಿ. ದೇಶಪಾಂಡೆಯವರ 'ಭ್ರಮೆ' ಕಥಾಸಂಕಲನದಲ್ಲಿ ಬರುವ ಕಥೆ 'ಪ್ರತಿಜ್ಞೆ' ಈ ಕಥೆಯಲ್ಲಿ ಪ್ರೀತಿ ಪ್ರೇಮದ ಜೊತೆಗೆ ಗೊಡ್ಡು ಸಂಪ್ರದಾಯವನ್ನು ಮೀರಿಸಿದ್ದನ್ನು ಕಾಣುತ್ತೇವೆ. ವಿಧವೆಯಾದ ರೂಪಾಳಿಗೆ ರಮೇಶ ಬಾಳು ನೀಡುತ್ತಾನೆ.

ರೂಪಾ ರಮೇಶ ಬಾಲ್ಯದಿಂದಲೂ ಜೊತೆಯಾಗಿ ಬೆಳೆದವರು. ಪ್ರಕೃತಿ ಬದಲಾವಣೆಯಾದಂತೆ ಅವರಲ್ಲಿಯೂ ಸಹಜ ಬದಲಾವಣೆಯಾಗುತ್ತದೆ. ಇದರ ಜೊತೆಗೆ ಅವರಲ್ಲಿ ಪ್ರೀತಿ ಚಿಗುರೊಡೆಯುತ್ತದೆ. ಅವರಿಬ್ಬರಲ್ಲಿಯ ಪ್ರೇಮ ಅಂಕುರವಾಗುತ್ತದೆ. ಗೋಪಾಲನ ತಂದೆ ಬೆಂಗಳೂರಿಗೆ ಹೋದಾಗ ರಮೇಶ ಮೂಕವೇದನೆ ಅನುಭವಿಸುತ್ತಾನೆ. ಒಂದು ದಿನ ರಮೇಶ ತನ್ನ

ಸೋದರತ್ತೆಯ ಮಗ ಶಶಿಕಾಂತನ ಮದುವೆಗೆ ಬೆಂಗಳೂರಿಗೆ ಹೋಗುತ್ತಾನೆ. ಅಲ್ಲಿ ರೂಪಾಳನ್ನು ಕಾಣುತ್ತಾನೆ. ಆಗ ರೂಪಾ ವಿಧವೆಯಾಗಿರುತ್ತಾಳೆ. ಅಲ್ಲಿಯೇ ರಮೇಶ ರೂಪಾಳನ್ನು ಮದುವೆಯಾಗುತ್ತಾನೆ. ಪ್ರೀತಿಗೆ ಎಲ್ಲ ಎಲ್ಲೆಯನ್ನು ಮೀರುವ ಶಕ್ತಿಯಿದೆ.

ಎಂ.ಜಿ. ದೇಶಪಾಂಡೆಯವರ 'ಹೂಬಿಡದ ಗುಲಾಬಿಗಿಡ' ಕಥಾಸಂಕಲನದಲ್ಲಿ ಬರುವ 'ಹೇಮಂತ' ಕಥೆಯಲ್ಲಿ ಅಖಿಲನ ದುರ್ನಡತೆಯಿಂದಾಗಿ ವರ್ಷಾಳ ಪ್ರೀತಿ ಅಳಿಸದೆ ಮತ್ತಷ್ಟು ಬಲಿಷ್ಠವಾಯಿತೆಂದು ಹೇಳಲಾಗಿದೆ.

ಈ ಕಥೆಯಲ್ಲಿ ಒಬ್ಬರಿಗೊಬ್ಬರ ಪ್ರೀತಿಸುತ್ತಿದ್ದ ಹೇಮಂತ, ವರ್ಷಾ ಮದುವೆ ಮಾಡಿಕೊಳ್ಳಬೇಕೆಂದು ಸಿದ್ದವಾಗಿದ್ದರು. ಅವರ ಪ್ರೀತಿ ನಡುವೆ ಬಂದ ಅಖಿಲ ತನಗೆ ಸಿಗಲಾರದ್ದು ಬೇರೊಬ್ಬರಿಗೂ ದೊರೆಯಕೊಡದೆಂದು ಸುಂದರವಾದ ವರ್ಷಾಳ ಮುಖಕ್ಕೆ ಆಸಿಡ್ ಹಾಕುತ್ತಾನೆ. ಇದರಿಂದ ಅಖಿಲ ಜೈಲು ಸೇರುತ್ತಾನೆ. ಆದರೆ ಹೇಮಂತ ಮತ್ತು ವರ್ಷಾಳ ಪ್ರೀತಿ ಮತ್ತಷ್ಟು ಬಲಿಷ್ಠವಾಗಿ ವಿವಾಹವಾಗಲು ಹೇಮಂತ ಒಪ್ಪುತ್ತಾನೆ.

ಎಂ.ಜಿ. ದೇಶಪಾಂಡೆಯವರ 'ಭ್ರಮೆ' ಕಥಾಸಂಕಲನದಲ್ಲಿ ಮೂಡಿ ಬಂದ 'ಅವಳು' ಕಥೆಯಲ್ಲಿ ಸಾಮಾಜಿಕ ಸಮಸ್ಯೆಯೊಂದನ್ನು ವಸ್ತುವಾಗಿಸಿದ್ದಾರೆ. ಅಂತರ್ಜಾತಿಯ ವಿವಾಹದ ಸಮಸ್ಯೆಯನ್ನು ಎತ್ತಿಕೊಂಡು ಕಥೆಯನ್ನು ಪ್ರಾರಂಭಿಸುತ್ತಾರೆ. ವೆಂಕಟರಾಮಯ್ಯ ಮತ್ತು ಸುಶೀಲಮ್ಮನ ಮಗ ವಿಜಯ ಇತನು ಸ್ವತಂತ್ರ ವಿಚಾರವಾದಿಯಾಗಿರುತ್ತಾನೆ. ಜೊತೆಗೆ ಮೂಢನಂಬಿಕೆ ಮತ್ತು ಗೊಡ್ಡು ಸಂಪ್ರದಾಯದ ವಿರುದ್ಧ ಸಿಡಿದೇಳುತ್ತಿದ್ದ. ಕಾಲೇಜು ದಿನಗಳಲ್ಲಿ ಮುಸ್ಲಿಂ ಹುಡುಗಿ ರೈನಾಳನ್ನು ಪ್ರೀತಿಸುತ್ತಾನೆ. ಅಂತರಜಾತಿ ವಿವಾಹವನ್ನು ತಂದೆ-ತಾಯಿ ಒಪ್ಪುವುದಿಲ್ಲ. ಮನೆ ಬಿಟ್ಟು ಹೋಗುತ್ತಾನೆ. ಆಗ ರೈನಾಳ ಜೊತೆ ವಿವಾಹವಾಗುತ್ತಾನೆ. ರೈನಾಳ ಹೆಸರು ಬದಲಾಯಿಸಿಕೊಂಡು ಬಿಟ್ಟು ತಂದೆ-ತಾಯಿಯ ಮನಸ್ಸನ್ನು ಗೆಲ್ಲುತ್ತಾನೆ.

<u>ಮಾನವೀಯ ಸಂವೇದನೆ:-</u>

ಮಾನವೀಯ ಸಂವೇದನೆಯಲ್ಲಿ ಮಾನವನ ಸಂಬಂಧಗಳಾಗಿರಬಹುದು. ಕೌಟಂಬಿಕ ಸಮಸ್ಯೆಗಳಾಗಿರಬಹುದು. ಭಾವನೆಗಳ ತುಮುಲಗಳನ್ನು ಇಲ್ಲಿ ಚಿತ್ರಿಸಿದ್ದನ್ನು ಕಾಣುತ್ತೇವೆ. ಮಾನವೀಯ ಸಂಬಂಧಕ್ಕೆ ಜಾತಿ ಮತ ಇಲ್ಲ ಎಂಬುದನ್ನು 'ಸಂಬಂಧ' ಕತೆಯಲ್ಲಿ ತೋರಿಸಿದ್ದಾರೆ. ದೇಶಪಾಂಡೆಯವರ 'ಮೌಲಾನಾಕಾಕಾ' ಈ ಕಥೆಯಲ್ಲಿಯ ಜಾತಿಮತಕ್ಕಿಂತಲೂ ಮಾನವೀಯ ಧರ್ಮ ದೊಡ್ಡದ್ದು ಎಂಬುದು ತೋರಿಸಿದ್ದಾರೆ. "ಪರೋಪಕಾರವೇ ಪುಣ್ಯ ಪರಪಿಡೆಯೇ ಪಾಪ" ಇದು ಹಿಂದೂ ಧರ್ಮದ ತಿರುಳು. ಎಲ್ಲರ ಸೃಷ್ಟಿಕರ್ತನೂ ಒಬ್ಬನೇ ದೇವ, ಮನುಕುಲವೆಲ್ಲ ಒಂದೇ

ಕುಟುಂಬವಿದ್ದಂತೆ ಎಲ್ಲರನ್ನು ಅಣ್ಣತಮ್ಮಂದಿರಂತೆ ಕಾಣು ಎನ್ನುತ್ತದೆ. ಇಸ್ಲಾಂ ಧರ್ಮ ಯಾರನ್ನು ದ್ವೇಷಿಸಬೇಡ ಯಾರನ್ನೂ ತಿರಸ್ಕರಿಸಬೇಡ, ಯಾರಿಗೂ ಕೆಡಕು ಮಾಡಬೇಡ ಎನ್ನುತ್ತದೆ. ಬೌದ್ಧಧರ್ಮ 'ದೇವರು ತಂದೆ ಮನುಷ್ಯರೆಲ್ಲ ಮಕ್ಕಳು' ಎನ್ನುತ್ತದೆ. ಕ್ರೈಸ್ತ ಧರ್ಮ 'ಅಹಿಂಸೆಗಿಂತ ದೊಡ್ಡ ಧರ್ಮವಿಲ್ಲ ಎನ್ನುತ್ತದೆ. ಜೈನ ಧರ್ಮ, ಇಸ್ಲಾಂ ಧರ್ಮದಲ್ಲಿ ಸಮಾನತೆ ಮತ್ತು ಮಾನವೀಯತೆ ವಿಚಾರ ಇದೆ"[೧೧] ಎನ್ನುತ್ತದೆ.

ಮಾನವೀಯ ಸಂವೇದನೆಯಲ್ಲಿ ಕೌಟಂಬಿಕ ಸಮಬಂಧವನ್ನು ಮತ್ತು ಅದರ ತಳಮಳವನ್ನು ಕೌಟುಂಬಿಕ ಚಿತ್ರಣದಲ್ಲಿ ಕಾಣುತ್ತೇವೆ. ತಂದೆ-ತಾಯಿಯ ಸಂಬಂಧ, ತಂದೆ-ತಾಯಿಯರ ಪ್ರತೀಕ ಮಕ್ಕಳ ಭಾವನೆಗಳು ಮಕ್ಕಳಿಂದ ತಂದೆ-ತಾಯಿ ನೋವು ಅನುಭವಿಸುವ ಸಂಗತಿ, ಅಪರಿಚಿತರಿಗಾಗಿ ಕಳಕಳಿಯನ್ನು ತೋರಿಸುವುದು. ಇಲ್ಲಿ ಡಾ॥ ಕೃಷ್ಣಮೂರ್ತಿ ಕಿತ್ತೂರರವರ "ಆ ಎರಡು ರೂಪಾಯಿ" ಲಲಿತ ಪ್ರಬಂಧದಲ್ಲಿ ಸುಲಗಾಯಿ ಮಾರುವವನಿಗೆ ಎರಡು ರೂಪಾಯಿ ಕೊಡಬೇಕಾಗಿರುತ್ತದೆ. ಅವನಿಗಾಗಿ ಹುಡುಕಿ-ಹುಡುಕಿ ದಣಿಯುತ್ತಾರೆ. ಕೇವಲ ಎರಡು ರೂಪಾಯಿಗಾಗಿ ಅಂತ ಅನಿಸಿದ್ದರು ಕೂಡ ಇಲ್ಲಿ ಮಾನವೀಯ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. ಹೀಗೆ ಇಲ್ಲಿ ಕಥೆಗಾರರು ಮಾನವ ಸಂಬಂಧವನ್ನು ಹೆಣೆದಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ರಿಮ್ಯೂಟ' ಕಥೆಯಲ್ಲಿ ಬರುವ ಪಾತ್ರಗಳು ಲತಾ, ಶೈಲೇಂದ್ರ, ರವೀಂದ್ರ, ಶಾಂತಾದೇವಿ, ರತ್ನ. ಶಾಂತದೇವಿಯ ಮಕ್ಕಳು ಶೇಲೇಂದ್ರ, ರವೀಂದ್ರ ಇವರ ಹೆಂಡತಿಯರು ಲತಾ, ರತ್ನ. ಲತಾಳ ಸೌಂದರ್ಯವನ್ನು ಕಂಡು ಶೈಲೇಂದ್ರ ಆಕೆಯನ್ನು ಮದುವೆಯಾದ. ಲತಾ ಮನೆಗೆ ತಕ್ಕ ಸೊಸೆ ಆಗಲಿಲ್ಲ. ಗಂಡನ ಕರೆದುಕೊಂಡು ಮನೆಯಿಂದ ದೂರವಾಗುತ್ತಾಳೆ. ರವೀಂದ್ರನಿಗೆ ರತ್ನಾ ಎನ್ನುವ ಹುಡುಗಿಯನ್ನು ತಂದು ಮದುವೆಮಾಡುತ್ತಾಳೆ ಶಾಂತಾದೇವಿ, ರತ್ನಾ ನೋಡಲು ಸುಂದರವಾಗಿಲ್ಲವಾದರು ಗುಣದಲ್ಲಿ ಶ್ರೀಮಂತಳಾಗಿದ್ದಳು. ಲತಾಳ ಮಾತು ಕೇಳಿ ಮನೆಯನ್ನು ಬಿಟ್ಟುಹೋದ, ಶೈಲೇಂದ್ರ ಪುನಃ ಶಾಂತದೇವಿಯ ಹತ್ತಿರ ಬರುತ್ತಾನೆ. ಇಲ್ಲಿ ರತ್ನ ಅವರನ್ನು ಹೃದಯಪೂರ್ವಕವಾಗಿ ಸ್ವಾಗತಿಸುತ್ತಾಳೆ. ಮಾನವನಿಗೆ ಸಂಬಂಧ ಅನ್ನವುದು ದೇವರು ಕೊಟ್ಟ ಒಂದು ವಿಶಿಷ್ಟ ಕೊಡುಗೆಯಾಗಿದೆ. ಇದು 'ಪಾರಿಜಾತ' ಕಥಾ ಸಂಕಲನದಲ್ಲಿ ಮೂಡಿ ಬಂದ ಕಥೆಯಾಗಿದೆ.

ಎಂ.ಜಿ. ದೇಶಪಾಂಡೆಯವರ 'ಭ್ರಮೆ'. ಈ ಕಥೆಯಲ್ಲಿ ಮನುಷ್ಯರ ಸಂಬಂಧಗಳು ಒಂದು 'ಭ್ರಮೆ'. ಅನ್ನುವ ಹಾಗೆ ಚಿತ್ರಿಸಿದ್ದಾರೆ. ಮಧು, ಪ್ರೀತಿ ಎನ್ನುವ ಹುಡುಗಿಯನ್ನು ಪ್ರೀತಿಸುತ್ತಾನೆ.

---

೧೧. ಇಸ್ಲಾಂ ಧರ್ಮದಲ್ಲಿ ಸಮಾನತೆ ಮತ್ತು ಮಾನವೀಯತರ (ವಿಚಾರ ಸಾಹಿತ್ಯ) ಸಂಪಾದಕರು ಡಾ. ಜಿ.ಆರ್. ತಿಪ್ಪೇಸ್ವಾಮಿ – ೨೦೦೦ ಪುಟ ಸಂಖ್ಯೆ ೧೭೭

ತಂದೆಯ ಮರಣದ ನಂತರ ಮನೆಯ ಜವಬ್ದಾರಿಯನ್ನು ಹೊತ್ತು ಕೊನೆಗೆ ತನ್ನ ಕೆಲಸದಲ್ಲೆ ಮೋಸ ಮಾಡಿ ಹಣ ತೆಗೆದುಕೊಂಡು ತಂಗಿಯ ಮದುವೆ ಮಾಡಬೇಕು ಎಂದಾಗ ಎಲ್ಲವೂ ಏರುಪೇರಾಗುತ್ತದೆ. ಪ್ರೀತಿಸಿದ ಹುಡುಗಿ ಕೂಡ ಇವನ ಕೆಲಸದಿಂದ ಅವಳು ಬಿಟ್ಟುಹೋಗುತ್ತಾಳೆ. ಸಂಬಂಧಗಳಲ್ಲಿ ಇಲ್ಲಿ ಬಿರುಗಾಳಿ ಏಳುತ್ತದೆ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾ ಸಂಕಲನದಲ್ಲಿನ 'ಕೊಂಡಿ ಕಳಚಿದಾಗ' ಈ ಕಥೆಯಲ್ಲಿ ಸಂಬಂಧಗಳು ತನ್ನ ಕೊಂಡಿಯನ್ನು ಕಳಚಿಕೊಳ್ಳುತ್ತಾ ಹೋಗುತ್ತದೆ. ಈ ಕಥೆಯಲ್ಲಿ ತಂದೆಗೆ ಮಕ್ಕಳು ಇದ್ದರು, ಅನಾಥ ಎಂದು ಹೇಳಬಹುದು. ಮಗ, ಸೊಸೆ, ಮಗಳು ನೊಂದ ಜೀವಕ್ಕೆ ಸಾಂತ್ವಾನವನ್ನು ತೋರಲಿಲ್ಲ. ಕೊನೆಗೆ ಮಾನವೀಯತೆ ತೋರಿಸಲಿಲ್ಲ. ಆಧುನಿಕ ಜಗತ್ತಿನಲ್ಲಿ ಸಂಬಂಧಗಳ ಕೊಂಡಿ ಕಳಚುತ್ತಾ ನಡೆದಿದೆ ಎಂಬುದನ್ನು ಇಲ್ಲಿ ತೋರಿಸಿದ್ದಾರೆ.

ರಾಯರಿಗೆ, ಸಾವಿತ್ರಮ್ಮನಿಗೆ ರವಿ, ರಾಜ, ರಂಜನಿ ಎಂಬ ಮಕ್ಕಳು. ತಂದೆಯ ಪ್ರಯತ್ನಕ್ಕೆ ಮೀರಿ ವಿದ್ಯಾಭ್ಯಾಸವನ್ನು ಮಾಡಿದರು. ರಾಜು, ರಸ್ತೆ ಅಪಘಾತದಲ್ಲಿ ಮರಣವನ್ನಪ್ಪಿದನು. ರವಿ ಇಂಜಿಯರನಾಗಿ ಬೆಂಗಳೂರಿನಲ್ಲಿ ಕೆಲಸಕ್ಕೆ ಸೇರಿದನು. ರಂಜನಿಗೂ ಮದುವೆ ಮಾಡಿಕೊಟ್ಟರು. ಆದರೆ ಕೆಲವು ದಿನಗಳ ನಂತರ ಗಂಡನ ಮನೆಯವರು ಹಣ ತರುವಂತೆ ಪೀಡಿಸುತ್ತಿದ್ದರು. ರವಿಗಾಗಿ, ರಂಜನಿಗಾಗಿ ಎಲ್ಲ ಹೊಲಮನೆಯನ್ನು ಮಾರಿಕೊಂಡರು. ಮಕ್ಕಳ ಕಾಟವನ್ನು ತಾಳಲಾರದೆ ಬೇಸತ್ತು ಹೋದರು. ಒಂದು ದಿನ ಸಾವಿತ್ರಮ್ಮ ಮರಣವನ್ನಪ್ಪಿದ್ದಳು. ರಾಯರು ಏಕಾಂಗಿಯಾದರು. ಬೆಂಗಳೂರಿನಲ್ಲಿದ್ದ ರವಿಯ ಮನೆಗೆ ಹೋದರು. ಸೊಸೆ ರಾಯರನ್ನು ಹೊರಹಾಕಿದ್ದಳು ಆಧುನಿಕ ಮಕ್ಕಳು ತಂದೆ-ತಾಯಿ ಪ್ರೀತಿಗೂ ಬೆಲೆಕೊಡದೆ ಅಮಾನವೀಯತೆಯಿಂದ ನಡೆದುಕೊಂಡ ಚಿತ್ರಣವಿದೆ.

ಎಂ.ಜಿ. ದೇಶಪಾಂಡೆಯವರ 'ಶ್ರಾವಣಿ' ಕಥಾ ಸಂಕಲನದಲ್ಲಿ ಬರುವ ಮತ್ತೊಂದು ಕಥೆ 'ವಿಧಿ ಬರೆದ ಕತೆ'. ಈ ಕಥೆಯಲ್ಲಿ ಒಂದು ದುರಂತ ಕುಟುಂಬದ ಕಥೆಯಾಗಿದೆ. ತಂದೆ ಮನೆಯ ಒಡೆಯ. ಒಂದು ವೇಳೆ ಜವಾಬ್ದಾರಿಯಿಂದ ಇರದೇ ಹೋದರೆ ನಡೆಯುವ ಅನಾಹುತ ಮಕ್ಕಳ ಮೇಲೆ ಆಗುವ ಪರಿಣಾಮವನ್ನು ಇಲ್ಲಿ ಚಿತ್ರಿಸಿದ್ದಾರೆ. ತಂದೆ-ತಾಯಿಯ ಪ್ರೀತಿ-ವಿಶ್ವಾಸದ ಬಾಳು ಮಕ್ಕಳ ಏಳಿಗೆಗೆ ಕಾರಣ. ಇದು ನಿಜಕ್ಕೂ ಸತ್ಯವಾದದ್ದು, 'ಬೇಲಿನೆ ಎದ್ದು ಹೊಲಮೇಯ್ದಾಗ' ಅದಕ್ಕೆ ಕಡಿವಾಣ ಹಾಕುವವರು ಯಾರು ಎಂಬುದನ್ನು ಇಲ್ಲಿ ಚಿತ್ರಿಸಿದ್ದಾರೆ.

ಜನಾರ್ಧನ, ಶಾಂತಾ ಇವರಿಗೆ ಕೃಷ್ಣ, ಗೋವಿಂದ, ಗೀತಾ, ಶಾರದೆ ಎಂಬ ಮಕ್ಕಳಿದ್ದರು. ತಂದೆ ವಿಲಾಸೀ ಜೀವನ ನಡೆಸುತ್ತಿದ್ದನು. ಅಲಂಕಾರಕ್ಕೆ, ಶೃಂಗಾರಕ್ಕೆ ಹೆಚ್ಚು ಮಹತ್ವವನ್ನು

ನೀಡುತ್ತಿದ್ದನು. ಹೊಟ್ಟೆಗೆ, ತಿನ್ನಲಿಕ್ಕೆ ಅನ್ನ ಇರದಿದ್ದರೂ ಕೂಡ ಆತ ಹೊಸ ಉಡುಪು ಧರಿಸುತ್ತಿದ್ದ, ಮಕ್ಕಳನ್ನು ಕೂಡ ನೋಡುತ್ತಿರಲಿಲ್ಲ. ಬಾಲ್ಯದಲ್ಲಿ ಕೃಷ್ಣ ಮನೆಯ ಜವಾಬ್ದಾರಿ ಹೊತ್ತ. ಜನಾರ್ಧನರಾಯರು ಮಾತ್ರ ವಿಲಾಸೀ ಜೀವನದಲ್ಲಿ ಮಗ್ನರಾಗಿದ್ದರು. ಕೊನೆಗೆ ಇವರ ಕುಟುಂಬದ ದುರಂತ ಶಾರದಾಳ ಮದುವೆಯನ್ನು ತಯಾರಿ ಮಾಡಿದಾಗ ಅವಳು ಕೂಡ ಪ್ರೀತಿಸಿದ ಹುಡುಗನ ಜೊತೆ ಓಡಿಹೋಗುತ್ತಾಳೆ. ಕೃಷ್ಣ, ಗೋವಿಂದ ಮನೆ ಬಿಟ್ಟು ಹೊರಟುಹೋಗುತ್ತಾರೆ. ಶಾಂತ ನೊಂದುಕೊಳ್ಳುತ್ತಾಳೆ, ರಾಯರು ಹೀನಾಯಮಾನ ಸ್ಥಿತಿಗೆ ತಲುಪುತ್ತಾರೆ. ಇಲ್ಲಿ ಶಾಂತ ಕೊನೆ ಉಸಿರೆಳೆಯುತ್ತಾಳೆ.

ಇದೇ ಕಥಾಸಂಕಲನದಲ್ಲಿ ಬರುವ ಮತ್ತೊಂದು ಕಥೆ 'ರವಿಚಂದ್ರ' ಈ ಕಥೆಯಲ್ಲಿ ಮನುಷ್ಯನಿಗೆ ಆಸೆ ಇರಬೇಕು. ಆದರೆ ಅತಿ ಆಸೆ ಇರಬಾರದು ಎಂಬುದನ್ನು ಇಲ್ಲಿ ಚಿತ್ರಿಸಿದ್ದಾರೆ. ರವಿಚಂದ್ರ ಬಡವನಾಗಿದ್ದಾಗ ಸುಖವಾಗಿ ಇದ್ದ, ಆದರೆ ತನ್ನ ಸಣ್ಣ-ಸಣ್ಣ ಆಸೆಯು ಕೂಡ ಈಡೇರಿಸಿಕೊಳ್ಳಲಾಗುತ್ತಿಲ್ಲ, ಅನ್ನುವ ಕೊರಗು ಮಾತ್ರ ಇತ್ತು. ಈ ಎಲ್ಲದರ ಚಿಂತೆಯಿಂದ ಆತ ತಪ್ಪುದಾರಿ ಹಿಡಿದು ಹಣ ಸಂಪಾದಿಸುವ ಬಗ್ಗೆ ಯೋಚಿಸುತ್ತಾನೆ. ದೊಡ್ಡ ಶ್ರೀಮಂತನು ಕೂಡ ಆಗುತ್ತಾನೆ. ಕಛೇರಿಯಲ್ಲಿ ಗೌರವ ಕೂಡ ಸಿಗುತ್ತದೆ. ಮುಂದೆ ಒಂದು ದಿನ ರವಿಚಂದ್ರನ ಬಗ್ಗೆ ಊಹಾಪೂಹಗಳು ಏಳುತ್ತವೆ. ಪೋಲಿಸರು ಮನೆಯನ್ನು ಶೋಧಿಸುತ್ತಾರೆ. ಕೊನೆಗೆ ರವಿಚಂದ್ರ ನೇಣು ಹಗ್ಗಕ್ಕೆ ಶರಣಾಗುತ್ತಾನೆ.

ಎಂ.ಜಿ. ದೇಶಪಾಂಡೆಯವರು ಮತ್ತೊಂದು ಕಥೆ 'ಉಡುಗೊರೆ' ಈ ಕಥೆಯಲ್ಲಿ ಶೇಖರ ತನ್ನ ಪ್ರೀತಿಯ ಬದಲಾಗಿ ತನ್ನ ಕಣ್ಣನ್ನು ಗೌರಿಗೆ ನೀಡುತ್ತಾನೆ. ಅವಳ ಬಾಳಿಗೆ ಬೆಳಕನ್ನು ತಂದುಕೊಡುತ್ತಾನೆ.

ಶೇಖರ ಒಳ್ಳೆಯ ವಿದ್ಯಾವಂತ ಗೌರಿಯ ಜೊತೆ ಬಾಲ್ಯದಿಂದಲೂ ಬೆಳೆದವನು ಶೇಖರ ಗೌರಿಯನ್ನು ಪ್ರೀತಿಸುತ್ತಾನೆ. ಆದರೆ ಹೇಳಲಾಗುವುದಿಲ್ಲ. ಶೇಖರ ಒಬ್ಬ ಬಡವನಾಗಿರುತ್ತಾನೆ. ತನ್ನ ಮುಂದಿನ ವಿದ್ಯಾಭ್ಯಾಸಕ್ಕಾಗಿ ಧಾರವಾಡಕ್ಕೆ ಹೋಗುತ್ತಾನೆ. ವಿದ್ಯಾಭ್ಯಾಸ ಮುಗಿಯುತ್ತದೆ. ಆದರೆ ಈತನಿಗೆ ಕ್ಯಾನ್ಸರ್‌ನಂತಹ ಕಾಯಿಲೆಗೆ ಗುರಿಯಾದಾಗ ತನ್ನ ಕಣ್ಣನ್ನು ಗೌರಿಗೆ ಕೊಡುತ್ತಾನೆ. ತಾನು ಪ್ರೀತಿಸಿದವರಿಗಾಗಿ ಮಾನವೀಯತೆಯಿಂದ ಮೆರೆಯುತ್ತಾನೆ.

ಎಂ.ಜಿ. ದೇಶಪಾಂಡೆಯವರ 'ದೇವಯಾನಿ' ಕಥೆಗೆ ದಿ. ಜಯತೀರ್ಥರಾಜ ಪುರೋಹಿತ ದತ್ತಿ ಕಥಾ ಸ್ಪರ್ಧೆಯಲ್ಲಿ ಬಹುಮಾನ ದೊರೆತಿದೆ. (೨೦೧೦) ಈ ಕಥೆಯಲ್ಲಿ ಸಂಬಂಧ ಜೊತೆಗೆ ಅದರ ಮಹತ್ವವನ್ನು ಕುರಿತು ಇಲ್ಲಿ ಚಿತ್ರಿಸಿದ್ದಾರೆ. ಸಂಬಂಧದ ಕೊಂಡಿಯನ್ನು ಗಟ್ಟಿಯಾಗಿ

ಇರಬೇಕಾದರೆ ಅಲ್ಲಿ ತ್ಯಾಗ, ಪ್ರೀತಿ ಅನ್ನುವ ಬೆಸುಗೆ ಬೇಕು ಎಂಬುದನ್ನು ಈ ಕಥೆಯಲ್ಲಿ ಚರ್ಚಿಸಿದ್ದಾರೆ.

ಅರುಂಧತಿ, ನರಹರಿ, ನೀಲಾ, ಶೀಲಾ, ಶಾಮ, ಅರವಿಂದ, ದೇವಯಾನಿ, ರವಿ ಈ ಸಂಬಂಧ ಜೊತೆಗೆ ಕಥೆಯನ್ನು ವಿಶ್ಲೇಷಿಸಿದ್ದಾರೆ. ಶೀಲಾ ನೀಲಾ ನರಹರಿಯ ತಂಗಿಯರು. 'ಅರುಂಧತಿ' ಈತನ ಹೆಂಡತಿ. ರಾಮ, ಅರವಿಂದ ಇವರುಗಳು ತಂಗೆಂದಿರ ಗಂಡಂದಿರು. ನೀಲಾನ ಮಗ ರವಿಯ ಜೊತೆ, ನರಹರಿಯ ಮಗಳು ದೇವಯಾನಿಯ ಜೊತೆ ಮದುವೆ ಪ್ರಸ್ತಾಪವನ್ನು ನೀಲಾನ ಮುಂದೆ ಇಟ್ಟಾಗ ಆಕೆ ನಿರಾಕರಿಸುತ್ತಾಳೆ. ತನ್ನ ಮಗಳಾದ ವೃಂದಾಳ ಮದುವೆಯ ನಂತರ ತನ್ನ ಮಗ ರವಿಯ ಮದುವೆ ದೇವಯಾನಿಯ ಜೊತೆ ಮಾಡುವುದಾಗಿ ಹೇಳುತ್ತಾಳೆ.

ನರಹರಿ ವೃಂದಾಳ ಮದುವೆ ಮಾಡುತ್ತಾರೆ. ನಂತರ ದೇವಯಾನಿ ಮದುವೆ ವಿಷಯ ಬಂದಾಗ ಪುನಃ ಆಕೆ ನಿರಾಕರಿಸುತ್ತಾಳೆ. ನೊಂದ ನರಹರಿರಾಯರು ದೇವಯಾನಿಯನ್ನು ಬೇರೆಯವರ ಜೊತೆ ಮದುವೆ ಮಾಡಲು ನಿರ್ಧರಿಸುತ್ತಾರೆ. ಆಗ ನೀಲಾ ತನ್ನ ತಪ್ಪಿಗೆ ಕ್ಷಮೆಯನ್ನು ಯಾಚಿಸಿ ತನ್ನ ಮಗ ರವಿಗೆ ದೇವಯಾನಿ ಜೊತೆ ಮದುವೆ ಮಾಡುವುದಾಗಿ ಬೇಡಿಕೊಳ್ಳುತ್ತಾಳೆ. ಕೊನೆಗೆ ನರಹರಿರಾಯರು ಒಪ್ಪುತ್ತಾರೆ.

'ದೇವಯಾನಿ' ಕಥಾ ಸಂಕಲನದಲ್ಲಿ ಬರುವ ಎಂ.ಜಿ. ದೇಶಪಾಂಡೆಯವರ ಮತ್ತೊಂದು ಕಥೆ 'ಅಂತಃಕರಣ' ಈ ಕಥೆಯಲ್ಲಿ ಮಾನವೀಯ ಸಂಬಂಧ ಮೌಲ್ಯವನ್ನು ಎತ್ತಿ ತೋರಿಸಿದ್ದಾರೆ. ರಕ್ತ ಸಂಬಂಧಕ್ಕಿಂತ ಮಾನವೀಯ ಸಂಬಂಧ ದೊಡ್ಡದ್ದು ಎಂಬುದನ್ನು ಇಲ್ಲಿ ಮನಕ್ಕೆ ತಟ್ಟುವಂತೆ ಚಿತ್ರಿಸಿದ್ದಾರೆ.

ಇಲ್ಲಿ ಬರುವ ಪಾತ್ರಗಳು ಕಲ್ಲಪ್ಪ, ಪೀರವ್ವ, ಶರಣು, ಸೂರ್ಯ. ಕಲ್ಲಪ್ಪ ಊರಿಗೆ ಒಬ್ಬ ದೊಡ್ಡ ಶ್ರೀಮಂತನಾಗಿರುತ್ತಾನೆ. ಎಷ್ಟೋ ದಿನಗಳಿಂದ ಆತನಿಗೆ ಮಕ್ಕಳಿರುವುದಿಲ್ಲ. ಆಗ ಸೂರ್ಯನ ಜನನವಾಗುತ್ತದೆ. ಆಗ ಕಲ್ಲಪ್ಪನಿಗೆ ಎಲ್ಲಿಲ್ಲದ ಸಂತೋಷವಾಗುತ್ತದೆ. ಬೆಳೆಯುತ್ತಾ ಮಗ ವಾಮನ ಮಾರ್ಗವನ್ನು ಅನುಸರಿಸುತ್ತಾನೆ. 'ಶರಣು' ಅವರ ಮನೆಯಲ್ಲಿ ಕೆಲಸ ಮಾಡುವ ಹುಡುಗ. ಆತ ಕಲ್ಲಪ್ಪ ಪೀರವ್ವನಿಗೆ ತನ್ನ ತಂದೆ-ತಾಯಿಯರ ಹಾಗೆ ಸೇವೆಮಾಡುತ್ತಾನೆ. ಸೂರ್ಯ ಮನೆಬಿಟ್ಟು ಹೋದಾಗ ಶರಣು ಅವರನ್ನು ನೋಡಿಕೊಳ್ಳುತ್ತಾನೆ. ಕೊನೆಗೆ ಪೀರವ್ವ ಮರಣವನ್ನಪ್ಪಿದಾಗ ಎಲ್ಲ ಆಸ್ತಿಯನ್ನು ಕಲ್ಲಪ್ಪ ಶರಣುವಿಗೆ ನೀಡಿ ಕೊನೆ ಉಸಿರೆಳೆಯುತ್ತಾನೆ.

ಎಂ.ಜಿ. ದೇಶಪಾಂಡೆಯವರ ಮತ್ತೊಂದು ಕಥೆ 'ತುಮುಲಗಳು'. ಈ ಕಥೆಯಲ್ಲಿ ಮನಸ್ಸಿನಲ್ಲಿ ಉಂಟಾದ ಭಾವನೆಗಳಿಗೆ ಕಡಿವಾಣ ಹಾಕುವುದನ್ನು ಚಿತ್ರಿಸಿದ್ದಾರೆ. ಹದಿನಾರು ವರ್ಷದ ಬಾಲಕ ಮನಸ್ಸಿನಲ್ಲೇ ಉಂಟಾದ ಭಾವನೆಗಳಿಗೆ ಇಪ್ಪತ್ತೆರಡು ವರ್ಷದ ಹೆಣ್ಣುಮಗಳು ಸಂಬಂಧದ ಮೂಲಕ ಹುಡುಗನ ಭಾವನೆಗಳ ಹೊಯ್ದಾಟಕ್ಕೆ ಪೂರ್ಣವಿರಾಮ ಇಡುತ್ತಾಳೆ. ಮತ್ತೊಂದು ಕಡೆ ಹೆಣ್ಣಿನ ತಾಯ್ತನದ ಅಂತಃ ಕರಣವನ್ನು ಇಲ್ಲಿ ಚಿತ್ರಿಸಿದ್ದಾರೆ.

ಶಾಂತಕ್ಕ ಇಪ್ಪತ್ತೆರಡು ವರ್ಷದ ಹೆಣ್ಣುಮಗಳು. ವಿಲಾಸ ಹದಿನಾರು ವರ್ಷದ ಹುಡುಗ ಶಾಂತಕ್ಕನ ಎದುರಿನ ಮನೆಯಲ್ಲಿಯೇ ಇರುತ್ತಿದ್ದ. ಶಾಂತಕ್ಕನ ಚೆಲುವನ್ನು ನೋಡಿ ಮೋಹಿಸಿದ. ಇದನ್ನು ತಿಳಿದ ಶಾಂತಕ್ಕ ಗಂಡ ಊರಿಗೆ ಹೋದಾಗ ವಿಲಾಸನನ್ನು ಮನೆಗೆ ಕರೆಯಿಸಿ ಒಂದು ಪತ್ರ ಕೈಯಲ್ಲಿ ಇಡುತ್ತಾಳೆ. ಅದನ್ನು ಓದಿ ವಿಲಾಸ ಅಕ್ಕ ಎಂದು ಸಂಭೋದಿಸಿದಾಗ ಶಾಂತಕ್ಕಗೆ ಸಂತೋಷವಾಗುತ್ತದೆ.

'ವಿಧಿಲೀಲೆ' ಈ ಕಥೆಯಲ್ಲಿ ಮಾನವನ ಬದುಕಿನಲ್ಲಿ ನಡೆಯಬಹುದಾದ ಆಕಸ್ಮಿಕ ಘಟನೆಯ ಬಗ್ಗೆ ಇಲ್ಲಿ ಚಿತ್ರಿಸಿದ್ದಾರೆ. ಬ್ರಹ್ಮಚಾರಿ ಇರಬೇಕೆಂದ ಮದುವೆಯಾದ, ಹೆಂಡತಿಯ ಮನೆ ತೊರೆದಾಗ ಹೆಂಡತಿಯ ಮರಣ, ಮಗನ ಅಗಲುವಿಕೆ ಈ ಎಲ್ಲವುಗಳು ಈ ಕಥೆಯಲ್ಲಿ ನಡೆದ ಆಕಸ್ಮಿಕವಾದ ಕಥೆಗಳಾಗಿವೆ.

ಈ ಕಥೆಯಲ್ಲಿ ಬರುವ ಪಾತ್ರಗಳು ಶ್ರೀನಿವಾಸರಾಯರು, ವೈಶಾಲಿ, ಕೃಷ್ಣ, ರವಿ, ವಿಶಾಲ ಈ ಪಾತ್ರದ ಮೂಲಕ ಕತೆಯನ್ನು ಹೆಣೆದಿದ್ದಾರೆ. ಶ್ರೀನಿವಾಸರಾಯರು ಕೃಷ್ಣನ ಮಂದಿರದಲ್ಲಿ ಹಾಡನ್ನು ಹಾಡುತ್ತಿರುತ್ತಾರೆ. ವೈಶಾಲಿ ಇವರ ಹಾಡನ್ನು ಮೆಚ್ಚಿ ಸಂಗೀತ ಕಲೆಯಲು ಹಾತೊರೆಯುತ್ತಾಳೆ. ಆಗ ರಾಯರು ಒಪ್ಪಿಕೊಳ್ಳುತ್ತಾರೆ. ಅವರ ಸಂಬಂಧ ಸ್ನೇಹಕ್ಕೆ ತಿರುಗಿ ನಂತರ ಪ್ರೀತಿಯಲ್ಲಿ ಪರಿವರ್ತನೆಯಾಗುತ್ತದೆ. ಕೃಷ್ಣ ಜನಿಸಿದ ನಂತರ ಮತ್ತೆ ವೈಶಾಲಿ ಗರ್ಭಿಣಿಯಾಗುತ್ತಾಳೆ. ಆಗ ರಾಯರು ಮಾವನ ಮನೆ ತೊರೆಯುತ್ತಾರೆ. ಇದರಿಂದ ನೊಂದ ವೈಶಾಲಿ ಮಗುವಿಗೆ ಜನ್ಮ ನೀಡಿ ಕೊನೆ ಉಸಿರೆಳೆಯುತ್ತಾಳೆ. ಆಗ ರಾಯರು ವೈಶಾಲಿಯ ನೆನಪಿಗಾಗಿ ಆ ಮಗುವಿಗೆ ವಿಶಾಲ ಎಂದು ನಾಮಕರಣ ಮಾಡುತ್ತಾರೆ. ತಾಯಿಯನ್ನು ಕೊಂದ ಮಗು ಎಂದು ಪೀಡಿಸುತ್ತಾರೆ. ಆ ನಾಲ್ಕು ವರ್ಷದ ಮಗು ಮನೆಬಿಟ್ಟು ಹೋಗುತ್ತದೆ. ಕೃಷ್ಣ ಬೆಳೆದು ದೊಡ್ಡವನಾದಾಗ ರಾಯರು ಅನಾರೋಗ್ಯದಿಂದ ಬಳಲುತ್ತಿರುತ್ತಾರೆ. ಒಂದು ಸಲ ರವಿ ರಕ್ತ ನೀಡಿ ಪ್ರಾಣ ಕಾಪಾಡುತ್ತಾನೆ. ಮತ್ತೊಂದು ಸಲ ಆತನ ಮಗ ವಿಶಾಲ ರಕ್ತವನ್ನು ನೀಡಿ ಪ್ರಾಣವನ್ನು ಕಾಪಾಡುತ್ತಾನೆ. ಕೊನೆಗೆ ರಾಯರಿಗೆ ಮಗ ವಿಶಾಲ ಸಿಗುತ್ತಾನೆ.

ಎಂ.ಜಿ. ದೇಶಪಾಂಡೆಯವರ "ಔದಾರ್ಯ' ಕಥೆಯು ಪಾರಿಜಾತ ಕಥಾ ಸಂಕಲನದಲ್ಲಿ ಬರುತ್ತದೆ. ಈ ಕಥೆಯಲ್ಲಿ ಮಾನವೀಯ ಸಂಬಂಧಗಳ ತುಲನೆಯನ್ನು ತೋರಿಸಿದ್ದಾರೆ. ಆಕಾಶನ ತಂದೆ-ತಾಯಿ ಬಡವರಾಗಿರುತ್ತಾರೆ. ಆಕಾಶನನ್ನು ವಿದ್ಯಾಭ್ಯಾಸಕ್ಕೆಂದು ದೃವರಾಜ ಮತ್ತು ವೈಶಾಲಿಯ ಮನೆಗೆ ತಂದು ಇಡುತ್ತಾರೆ. ವೈಶಾಲಿ ಆಕಾಶನ ಮೇಲೆ ಸದಾ ಸಿಡುಕತನವನ್ನು ತೋರಿಸುತ್ತಾ ಇರುತ್ತಾಳೆ. ಆಕಾಶ ಮನೆ ಕೆಲಸವನ್ನು ಮಾಡಿ ಶಿಕ್ಷಣವನ್ನು ಪಡೆದು ನಂತರ ಮನೆ ತ್ಯಜಿಸಿ ಹೋಗುತ್ತಾನೆ. ಅಪಘಾತದಲ್ಲಿ ದೃವರಾಜರು ಮರಣ ಹೊಂದುತ್ತಾರೆ. ಆಗ ವೈಶಾಲಿ ಅನಾಥಳಾದಾಗ ಆಗ ಆಕಾಶ ನಾನಿದಿನಿ ಅಮ್ಮ ಅಂದಾಗ ವೈಶಾಲಿಗೆ ಸಂಕೋಚವಾಗುತ್ತದೆ. ಮಾಡಿದ ಉಪಕಾರವನ್ನು ಮರೆಯದೆ ಆಕಾಶ ಮಾನವೀಯತೆ ಮೆರೆದಿದ್ದಾರೆ.

'ಪಾರಿಜಾತ' ಕಥಾ ಸಂಕಲನದಲ್ಲಿಯ ಮತ್ತೊಂದು ಕಥೆ 'ಪರಿಣಾಮ'. ಈ ಕಥೆಯಲ್ಲಿ ಜೀವನ ಎಂಬ ಚಕ್ರದಲ್ಲಿ ಹೊಂದಿಕೆ ಅನ್ನುವುದು ಇರದೇ ಹೋದರೆ ಬಾಳು ದುರಂತ ಅನ್ನವುದನ್ನು ಇಲ್ಲಿ ಚಿತ್ರಿಸಿದ್ಧಾರೆ.



ಗಂಗಾಧರ ವಿದ್ಯೆಯನ್ನು ಸಂಪಾದಿಸಿ ಶ್ರೀಮಂತನಾಗಬೇಕು ಅನ್ನುವ ಆಸೆಯನ್ನು ಹೊಂದಿರುತ್ತಾನೆ. ಅಷ್ಟರಲ್ಲೆ ತಂದೆ ಮರಣನಪ್ಪುತ್ತಾನೆ. ತಾಯಿ-ತಂಗಿಯರ ಜವಬ್ದಾರಿಯು ಈತನ ಮೇಲೆ ಬೀಳುತ್ತದೆ. ಶಾಂತಾದೇವಿ ಅನ್ನುವವಳು ವಿದ್ಯಾವಂತೆ ಮತ್ತು ಸುಂದರವಾಗಿರುತ್ತಾಳೆ. ಈಕೆ ಮನೆಗೆ ಹೊಂದಿಕೊಳ್ಳದೇ ತಾಯಿ-ತಂಗಿಯರಿಗೆ ಹಿಂಸಿಸುತ್ತಾಳೆ. ಎರಡು ಮಕ್ಕಳ ತಾಯಿಯಾದರೂ ಕೂಡ ಅವಳ ಕ್ರೂರತನ ನಿಲ್ಲುವುದಿಲ್ಲ. ಶಾಂತಾದೇವಿ ಮನೆಯಲ್ಲಿ ಜಗಳವಾಡಿ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇದನ್ನು ನೋಡಿ ತಾಯಿ ತೀರಿಕೊಂಡಳು. ಇದನೆಲ್ಲ ನೋಡಿ ಗಂಗಾಧರ ತಾಳಲಾರದೆ ಬೆಂಕಿಹಚ್ಚಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಮನೆಯಲ್ಲಿ ಅಶಾಂತಿ ತಾಂಡವವಾಡುತ್ತಿದ್ದರೆ ಮನೆಯು ಸ್ಮಶಾನವಾಗುತ್ತದೆ ಎಂಬುದನ್ನು ಇಲ್ಲಿ ಚಿತ್ರಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ "ಮಗುವಿನ ಮನಸ್ಸು" ಮಗುವಿನ ಮೂಲಕ ಮಾನವೀಯ ಗುಣಗಳನ್ನು ಕಥೆಗಾರರು ಚಿತ್ರಿಸಿದ್ದಾರೆ. ಹಸಿದ ಹೊಟ್ಟೆಗೆ ಅನ್ನ ನೀಡುವದೆ ಪುಣ್ಯ' ಅನ್ನುವಂತೆ ಪಿಂಕಿ, ರಾಮು ಅನ್ನುವ ಅನಾಥನಿಗೆ ಆಶ್ರಯವನ್ನು ಕೊಟ್ಟು ಅವಳು ಅವನ ಕಷ್ಟಗಳಿಗೆ ಸ್ಪಂದಿಸಿ ಮಾನವೀಯತೆಯನ್ನು ಮೆರೆದಿದ್ದಾಳೆ.

ಪಿಂಕಿ ರಸ್ತೆಯ ಮೇಲೆ ಬಿದ್ದ ರಾಮು ಎಂಬ ವ್ಯಕ್ತಿಯನ್ನು ಕರೆದುಕೊಂಡು ಬಂದು ಆಶ್ರಯ ನೀಡುತ್ತಾಳೆ. ತಾಯಿ ಅನುರಾಧಾಳಿಗೆ ಅದು ಸರಿ ಅನಿಸುವುದಿಲ್ಲ. ಆದರೂ ತಂದೆಯಾದ ಶ್ರೀಪತಿರಾಯರ ಸಹಾಯದಿಂದ ಮನೆಯಲ್ಲಿ ಕೆಲಸ ಮಾಡಲು ಇಟ್ಟುಕೊಳ್ಳುತ್ತಾರೆ. ರಾಮು ತನ್ನ

ಹಿಂದಿನ ಜೀವನವನ್ನು ನೆನಪಿಸಿಕೊಂಡು ಅಳುವಾಗ ಪಿಂಕಿ ಮಗುವಿನಂತೆ ಕೈಯ ತುತ್ತನ್ನು ತಿನಿಸುತ್ತಾಳೆ. ತಾಯಿ ಅನುರಾಧ ಶಪಿಸುತ್ತಾಳೆ.

ಇವರ ಮತ್ತೊಂದು ಕಥೆ 'ಕೊನೆಯ ಗಳಿಗೆ' ಈ ಕಥೆಯಲ್ಲಿ 'ಉಪ್ಪಿಗಿಂತ ರುಚಿ ಇಲ್ಲ ತಾಯಿಗಿಂತ ಬಂಧುವಿಲ್ಲ' ಎಂಬ ಗಾದೆ ಮಾತನ್ನು ಸುಳ್ಳುಮಾಡಿದ ಮಗನ ಕಥೆ ಚಿತ್ರಿಸಿದ್ದಾರೆ. ಹಾಲುಣಿಸಿದ ತಾಯಿಯನ್ನೆ ಮನೆಯಿಂದ ಆಚೆ ಹಾಕಿದ ಕಟುಕ ಮಗನ ಕಥೆಯಾಗಿದೆ.

ಜಯದೇವಿ ಅನಾರೋಗ್ಯಕ್ಕೆ ತುತ್ತಾದಾಗ ಮಗ ವಿಲಾಸನಿಗೆ ಮದುವೆ ಮಾಡುವುದಾಗಿ ಯೋಚಿಸುತ್ತಾಳೆ. ಬಡ ಹೆಣ್ಣನ್ನು ಮದುವೆಗೆ ಒಪ್ಪದೆ ಲತಾ ಅನ್ನುವ ಶ್ರೀಮಂತ ಮನೆತನದ ಹೆಣ್ಣನ್ನು ಮದುವೆಯಾಗುತ್ತಾನೆ. ಇವಳು ಅತ್ತೆಯ ಅನಾರೋಗ್ಯಕ್ಕೆ ಸಾಂತ್ವನ ನೀಡಲಿಲ್ಲ. ಬದಲಾಗಿ ತನ್ನ ಗಂಡನ ಜೊತೆ ಸೇರಿ ಜಯದೇವಿಗೆ ಹೊರಹಾಕುತ್ತಾಳೆ.

'ಸರ್ಪನೆರಳು' ಎಂಬ ಕಥೆಯಲ್ಲಿ ದೇಶಪಾಂಡೆಯವರು 'ಉಂಡ ಮನೆಗೆ ದ್ರೋಹ ಬಗೆಯುವದು' ಅನ್ನುವ ಹಾಗೆ ಗೋಪಿಯ ಪಾತ್ರದ ಮೂಲಕ ಈ ಹೇಳಿಕೆಯಂತೆ ಪಾತ್ರ ಚಿತ್ರಿಸಿದ್ದಾರೆ.

ಶರ್ವಾಣಿ ತವರು ಮನೆಯನ್ನು ನೆನೆದುಕೊಂಡು ನರಳುತ್ತಿರುವಾಗ ಅದನ್ನು ನೋಡಲಾಗದ ಪತಿ ಶಾಮನು, ಅವಳ ತಮ್ಮನಾದ ಗೋಪಿಯನ್ನು ಕರೆತರುತ್ತಾನೆ. ಶರ್ವಾಣಿ ಸಂತೋಷದಿಂದ ಇರುತ್ತಾಳೆ. ಇವರ ಶ್ರೀಮಂತಿಕೆಯನ್ನು ನೋಡಿ ಗೋಪಿ ಮನಸ್ಸಿನಲ್ಲೆ ಮರಗುತ್ತಾನೆ. ಒಂದು ದಿನ ಮನೆಗಳ್ಳತನಕ್ಕೆ ಪ್ರಯತ್ನಿಸುತ್ತಾನೆ. ಇದನ್ನು ತಿಳಿದ ಶಾಮ ಮರಣವನ್ನಪ್ಪಿಕೊಳ್ಳುತ್ತಾನೆ.

ಎಂ.ಜಿ. ದೇಶಪಾಂಡೆಯವರ 'ಹೂ ಬಿಡದ ಗುಲಾಬಿ ಗಿಡ' ಕಥಾಸಂಕಲನದಲ್ಲಿ ಮೂಡಿ ಬರುವ ಕಥೆಯೆಂದರೆ "ಚಿನ್ನದ ಚೈನು" ಈ ಕಥೆಯಲ್ಲಿ "ಬಲಗೈ ಮಾಡಿದ ಸಹಾಯ ಎಡಗೈಗೆ ಗೊತ್ತಾಗಬಾರದು" ಎನ್ನುವಂತೆ ಮತ್ತೊಬ್ಬರಿಗೆ ಮಾಡಿದ ಸಹಾಯದಿಂದ ಶಾಮನ ಸಂಸಾರ ಸುಖದಿಂದ ಬಾಳತೊಡಗಿತು. ಎನ್ನುವುದನ್ನು ಶಾಮನ ಪಾತ್ರದ ಮೂಲಕ ಮಾನವೀಯ ಸಂವೇದನೆಯನ್ನು ಇಲ್ಲಿ ಚಿತ್ರಿಸಿದ್ದಾರೆ.

ಇದೇ ಕಥಾ ಸಂಕಲನದಲ್ಲಿ ಬರುವ ಇವರ ಮತ್ತೊಂದು ಕಥೆ "ಪಶ್ಚಾತ್ತಾಪ" ಈ ಕಥೆಯಲ್ಲಿ ಒಬ್ಬ ಮನುಷ್ಯನನ್ನು ಮತ್ತೊಬ್ಬ ಕೆಡಕು ಮಾಡಲು ಹೋದರೆ ಅದು ಅವನನ್ನೆ ತಿನ್ನುತ್ತದೆ ಎಂಬುದನ್ನು ಚಿತ್ರಿಸಿದ್ದಾರೆ.

ಸಂತನಾದ ಏಕನಾಥ ಮಹಾರಾಜರಿಗೆ ಕೋಪ ಬರಿಸಲೆಂದು ದುರುಳ ಎಷ್ಟೇ ಸತತ ಪ್ರಯತ್ನ ಮಾಡಿದರೂ ಫಲಿಸುವುದಿಲ್ಲ. ಕೊನೆಗೆ ತಾನೆ ಶರಣಾಗುತ್ತಾನೆ. ಇದರಿಂದ ಏಕನಾಥ ಮಹಾರಾಜರ ಆಪೇಕ್ಷೆಯೂ ಸಹ ಕೈಗೂಡುತ್ತದೆ.

ಎಂ.ಜಿ. ದೇಶಪಾಂಡೆಯವರ ಮತ್ತೊಂದು ಕಥೆ "ಯಾರು ತನ್ನವರು" ಈ ಕಥೆಯು ಹೂಬಿಡದ ಗುಲಾಬಿ ಗಿಡ ಕಥಾ ಸಂಕಲನದಲ್ಲಿ ಮೂಡಿ ಬಂದಿದೆ. ಈ ಕಥೆಯಲ್ಲಿ ತಾಳ್ಮೆ, ಮಾನವೀಯತೆಯ ಗುಣಗಳು ಮೂಡಿಬಂದಿರುವುದು ಕಾಣುತ್ತೇವೆ.

ಮಕ್ಕಳಿಲ್ಲದ ಸುರೇಶ ಮತ್ತು ಸುಶ್ಮಾಳಿಗೆ ಸುಧಿರ್‌ನೇ ಮಗನಾಗಿದ್ದನು. ಸುಧೀರ್ ತಾಯಿಯನ್ನು ಕಳೆದುಕೊಂಡ ಮೇಲೆ ಅತ್ತೆ ಮತ್ತು ಮಾವನ ಆಶ್ರಯದಲ್ಲಿ ಬೆಳೆದನು. ಮಗನಂತೆ ಸಾಕಿ ಸಲುಹಿ, ಊಟ, ಬಟ್ಟೆ, ವಿದ್ಯಾಭ್ಯಾಸ ನೀಡಿದ ಸುರೇಶ ಮತ್ತು ಸುಷ್ಮಾರವರಿಗೆ ಸುಧೀರನ ಚಿನ್ನದ ವಿಷಯದ ಕುರಿತು ಆಡುವ ಮಾತುಗಳು ನುಂಗಲಾರದ ತುತ್ತಾದವು. ಆದರೂ ಅವರು ಸುಧೀರನಿಗೆ ಎದುರು ವಾದಿಸದೆ ಕಂಗಳಲ್ಲಿ ಕಣ್ಣೀರು ಧಾರೆ ಹರಿದು ಬಂದವು.

ಎಂ.ಜಿ. ದೇಶಪಾಂಡೆಯವರ ಮತ್ತೊಂದು ಕಥೆ "ನಿರ್ಧಾರ" ಈ ಕಥೆಯಲ್ಲಿ ಮನುಷ್ಯನ ಜೀವನದಲ್ಲಿ ಕಷ್ಟ-ಸುಖ ಕ್ಷಣಮಾತ್ರ ಆದರೆ ಅದನ್ನು ಒಪ್ಪಿಕೊಳ್ಳುವ ಸಾಮರ್ಥ್ಯ ಮನುಷ್ಯನಲ್ಲಿರಬೇಕೆಂಬುದನ್ನು ಈ ಕಥೆಯ ಮೂಲಕ ಚಿತ್ರಿಸಿದ್ದಾರೆ.

ಶೇಖರ್ ಮತ್ತು ರಮಾಳಿಗೆ ರಮೇಶ ಮತ್ತು ರವಿ ಎಂಬ ಮಕ್ಕಳು. ರೋಹಿಣಿ ಮಗಳು. ಅದೊಂದು ದಿನ ಕ್ಯಾನ್ಸರ್ ಕಾಯಿಲೆಯಿಂದ ರಮಾ ಅಸುನಿಗಿದಳು. ಮತ್ತೊಮ್ಮೆ ಮದುವೆಗೆ ಒಪ್ಪದ ಶೇಖರ್ ತನ್ನ ಕಛೇರಿಯಲ್ಲಿಯೇ ಕೆಲಸ ಮಾಡುತ್ತಿದ್ದ ರೂಪಾಳನ್ನು ರಮಾ ನಾರಾಯಣನಿಗೆ ವಿವಾಹ ಮಾಡಿಕೊಳ್ಳುವುದಾಗಿ ಹೇಳುವುದು. ಶೇಖರನ ಜೀವನದಲ್ಲಿ ರಮಾಳಿಗೆ ಬಿಟ್ಟು ಬೇರೆಯವರಿಗೆ ಜಾಗ ಕೊಡದಿರುವುದು ಅವನ ಮಾನವೀಯತೆಗೆ ಸಾಕ್ಷಿಯಾಗಿದೆ.

ಎಂ.ಜಿ. ದೇಶಪಾಂಡೆಯವರ 'ಪಾರಿಜಾತ' ಕಥಾಸಂಕಲನದಲ್ಲಿಯ 'ಕಾಕತಾಳಿಯ' ಕಥೆಯಲ್ಲಿ ಸಂಬಂಧಗಳ ಕಾಕತಾಳಿಯವನ್ನು ಚಿತ್ರಿಸಿದ್ದಾರೆ. ಸತೀಶ, ಕಾಂತಿನಾಥ, ಕಲ್ಪನಾ ಈ ಮೂವರ ಕಾಕತಾಳಿಯ ಸಂಬಂಧದ ಚಿತ್ರಣವನ್ನು ನೀಡಿದ್ದಾರೆ.

ಸತೀಶ, ಕಾಂತಿನಾಥ ಇಬ್ಬರು ಸ್ನೇಹಿತರು, ಕಲ್ಪನಾ ಕಾಂತಿನಾಥನ ಹೆಂಡತಿ. ಸತೀಶ ಒಂದು ದಿನ ಮನೆಗೆ ಬಂದಾಗ ಕಾಂತಿನಾಥ ಮನೆಗೆ ಬರಲು ತಡವಾಯಿತು. ಆಗ ಲೈಟ ಹೋಗುತ್ತದೆ. ಆಗ

ಸತೀಶ ಮತ್ತು ಕಲ್ಪನಾಳ ಬಗ್ಗೆ ಕಾಕತಾಳೀಯ ಸಂಬಂಧ ಬೆಳೆಯುತ್ತದೆ. ಇದನ್ನು ಕಂಡ ಕಾಂತಿನಾಥ ಸತೀಶನಿಗೆ ಧನ್ಯವಾದಗಳನ್ನು ಅರ್ಪಿಸುತ್ತಾನೆ. ಕಾರಣ ಆತ ಅಸಮರ್ಥನಾಗಿರುವದಕ್ಕೆ.

ಎಂ.ಜಿ. ದೇಶಪಾಂಡೆಯವರ 'ಬಲಿ' ಕಥೆಯಲ್ಲಿ ಮಾನವನ ರಾಕ್ಷಸರೂಪದ ದರ್ಶನವನ್ನು ಮಾಡಿಸಿದ್ದಾರೆ. ತಾನು ಮಾಡಿದ ತಪ್ಪಿಗೆ ಮಾನವ ಸ್ವತಹ ಬಲಿಪಶುವಾಗುತ್ತಾನೆ. ಎಂಬುದನ್ನು ಇಲ್ಲಿ ಚಿತ್ರಿಸಿದ್ದಾರೆ.

ಶಾಂತಿ ನೋಡಲು ಸುಂದರವಾಗಿದ್ದಳು. ಅಜಿತ ಆಕೆಯನ್ನು ಮದುವೆಯಾಗುವ ಹಂಬಲವನ್ನು ಹೊಂದಿದ. ಆದರೆ ಆಕೆ ಬಡವಳಾಗಿರುತ್ತಾಳೆ. ಅಜಿತನಿಗೆ ಹಣದಾಸೆ ಇರುತ್ತದೆ. ಶಾಂತಿಯು ದೂರದ ಸಂಬಂಧಿಗಳು ಅಜಿತನಿಗೆ ವರದಕ್ಷಿಣೆ ಕೊಟ್ಟು ಮದುವೆ ಮಾಡುತ್ತಾರೆ. ಬರುಬರುತ್ತಾ ಅವಳ ಮೇಲೆ ಆಸೆ ಕಡಿಮೆಯಾಗುತ್ತಾ ಬರುತ್ತದೆ. ಆತ ಕೆಲಸ ಮಾಡುವ ಕಛೇರಿಯಲ್ಲಿಯೇ ಪ್ರೇಮ ಎಂಬ ವಿಧವೆಯ ಪರಿಚಯವಾಗುತ್ತದೆ. ಪರಸ್ಪರ ಸ್ನೇಹ, ಪ್ರೀತಿಗೆ ತಿರುಗುತ್ತದೆ. ಶಾಂತಿಗೆ ವಿಚ್ಛೇದನ ನೀಡಿ ಪ್ರೇಮಾಳನ್ನು ಮದುವೆಯಾಗಲು ಬಯಸುತ್ತಾನೆ. ಆಕೆಗೆ ಬೆಂಕಿ ಹಚ್ಚಲು ಬಂದಾಗ ಈ ದುರಂತದಲ್ಲಿ ಪ್ರೇಮ ಅಜಿತ ಸಾವನ್ನಪ್ಪುತ್ತಾರೆ. ಶಾಂತಿ ಚೇತರಿಸಿಕೊಂಡು ಮರುಮದುವೆ ಮಾಡಿಕೊಂಡು ಸುಖವಾಗಿರುತ್ತಾಳೆ.

'ಅನುಮಾನ' ಈ ಕಥೆಯಲ್ಲಿ ಮಾನವೀಯ ಸಂಬಂಧಗಳ ತಪ್ಪು ಕಲ್ಪನೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ಸ್ವತಃ ಅಣ್ಣನೆ ತನ್ನ ತಮ್ಮ ಮತ್ತು ಹೆಂಡತಿಯ ಮೇಲೆ ಅನುಮಾನವನ್ನು ಪಡುತ್ತಾನೆ. ಈ ಒಂದು ಅನುಮಾನದಿಂದ ಸಂಬಂಧಗಳಲ್ಲಿ ಬಿರುಕು ಬೀಳುತ್ತದೆ. ಎಂಬ ಎಚ್ಚರಿಕೆಯನ್ನು ಇಲ್ಲಿ ನೀಡಿದ್ದಾರೆ.

ತಮ್ಮ ಅತ್ತಿಗೆ ಜೊತೆ ಹೆಚ್ಚು ಸಲಿಗೆಯಿಂದ ಇರುತ್ತಾನೆ. ಇದನ್ನು ಕಂಡ ಅರವಿಂದ ತಮ್ಮನ ಮೇಲೆ ಸಂಶಯವನ್ನು ಪಡುತ್ತಾನೆ. ತಮ್ಮನನ್ನು ಮನೆಯಿಂದ ಹೊರಹಾಕುತ್ತಾನೆ. ಬಹಳ ದಿವಸದ ಮೇಲೆ ಹೆಂಡತಿಯಾದ ದೀಪಿಕಾಳ ಮೇಲೆ ಒಂದು ಪತ್ರ ಬರುತ್ತದೆ. ಅದನ್ನು ಅರವಿಂದ ಓದುತ್ತಾನೆ. ಅತ್ತಿಗೆ ನಿಮ್ಮ ತೊರೆದು ನಾನು ಜೀವಿಸಲಾರೆ, ನೀನೆ ನನ್ನ ತಾಯಿ-ತಂದೆ, ಅಣ್ಣನ ಕೋಪಕ್ಕೆ ಚಿಂತಿಸಬೇಡಿ ನೀವು ಸುಖವಾಗಿ ಬಾಳಿರಿ. ನನ್ನಿಂದೇನಾದರೂ ತಪ್ಪುಗಳಾದರೆ ಕ್ಷಮಿಸಿ. ಈ ಪತ್ರ ನಿಮ್ಮ ಕೈ ಸೇರಿದಾಗ ನಾನು ಬದುಕಿರಲಾರೆ ಅರವಿಂದ ನಿಂತಲ್ಲೆ ಬೆವರುವನು"[೧೨]

ಎಂ.ಜಿ. ದೇಶಪಾಂಡೆಯವರ 'ತೀರ್ಥಯಾತ್ರೆ' ಈ ಕಥೆಯಲ್ಲಿ ತಾಯಿಯನ್ನು ದೂರತಳ್ಳಿ ಪುನಃ ತಾಯಿಯನ್ನು ಸೇರಲು ಹೋದಾಗ ತಾಯಿಯ ಪ್ರಾಣ ಪಕ್ಷಿ ಹಾರಿಹೋಗುತ್ತದೆ. ಮಾಡಿದ ತಪ್ಪಿಗೆ ಪಶ್ಚಾತ್ತಾಪ ಕೂಡ ಸಿಗದೆ ಬುದ್ದಿಗೇಡಿ ಮಗನ ಚಿತ್ರಣವಿದೆ.

---

೧೨. ಪಾರಿಜಾತ 'ಅನುಮಾನ' ಕಥೆಗಾರ ಎಂ.ಜಿ.ದೇಶಪಾಂಡೆ ಪುಟ ಸಂಖ್ಯೆ ೨೭.

ಈ ಕಥೆಯಲ್ಲಿ ಬರುವ ಪಾತ್ರಗಳು ರಾಜೇಶ, ರಾಧಾದೇವಿ, ನೀಲಾ. ರಾಧಾದೇವಿ ಚಿಕ್ಕ ವಯಸ್ಸಿನಲ್ಲೆ ಗಂಡನನ್ನು ಕಳೆದುಕೊಳ್ಳುತ್ತಾಳೆ. ರಾಜೇಶನನ್ನು ಬೆಳೆಸಿ ದೊಡ್ಡವಳನ್ನಾಗಿ ಮಾಡುತ್ತಾಳೆ. ರಾಜೇಶ ನೀಲಾ ಎಂಬ ಶ್ರೀಮಂತ ಮನೆತನದ ಹುಡುಗಿಯನ್ನು ಮದುವೆಯಾಗುತ್ತಾನೆ. ನೀಲಾ, ರಾಜೇಶ, ಇಬ್ಬರು ತಾಯಿಯನ್ನು ವೃದ್ಧಾಶ್ರಮಕ್ಕೆ ಕಳುಹಿಸುತ್ತಾರೆ. ರಾಜೇಶ ತೀರ್ಥಯಾತ್ರೆಗೆ ಹೋದಾಗ ತಾನು ಮಾಡಿದ ತಪ್ಪಿನ ಅರಿವು ಆಗುತ್ತದೆ. ತಾಯಿಯನ್ನು ನೋಡಲು ವೃದ್ಧಾಶ್ರಮಕ್ಕೆ ಬಂದಾಗ ತಾಯಿ ಸತ್ತು ಎರಡು ದಿನವಾಗುತ್ತದೆ.

'ಗಾಳಿಗೋಪುರ' ಈ ಕಥೆಯಲ್ಲಿ ತಾಯಿಯನ್ನು ಬದುಕಿಸಲು ನಿಸ್ಸಾಹಯಕನಾದ ಅಸಾಹಾಯಕ ಮಗನ ಕತೆಯನ್ನು ಹೆಣೆದಿದ್ದಾರೆ.

ಈ ಕಥೆಯ ಪಾತ್ರಗಳು ಲಲಿತಮ್ಮ, ರಾಜೀವನ ತಾಯಿ. ಮಗ ಓದಿ ಪದವೀಧರನಾದರೂ ನೌಕರಿ ಸಿಗದೆ ನಿರಾಶನಾದನು. ಇದರಿಂದಲೇ ಲಲಿತಮ್ಮಾ ಹಾಸಿಗೆ ಹಿಡಿದಳು. ತಾಯಿಯನ್ನು ಬದುಕಿಸುವುದಕ್ಕಾಗಿ ರಕ್ತ ಮಾರಿ ಹಣ ತಂದಾಗ ತಾಯಿಯ ಪ್ರಾಣ ಪಕ್ಷಿ ಹಾರಿ ಹೋಗುತ್ತದೆ.

ಎಂ.ಜಿ. ದೇಶಪಾಂಡೆಯವರ 'ಕರ್ತವ್ಯ' ಎನ್ನುವ ಕಥೆಯಲ್ಲಿ ಮನುಷ್ಯನ ಕರ್ತವ್ಯ ಪ್ರಜ್ಞೆಯನ್ನು ಚಿತ್ರಿಸಿದ್ದಾರೆ.

ಲಕ್ಷ್ಮೀ ಹಳ್ಳಿ ಹುಡುಗಿ, ಗೌಡನ ಬಲತ್ಕಾರದಿಂದ ತಪ್ಪಿಸಿಕೊಂಡು ಬಂದಾಗ ತಂದೆ ವಿಷಯ ತಿಳಿದು ಆಸ್ತಿ ಪಾಸ್ತಿಯನ್ನು ಮಾರಿ ನಗರ ಸೇರಿದನು. ಲಕ್ಷ್ಮೀ ಓದಿ ವೈದ್ಯರಾದಾಗ ಗೌಡ ರೋಗಿಯಾಗಿ ಮುಂದೆ ಬಂದಾಗ, ಎಲ್ಲವನ್ನು ಮರೆತು ಕರ್ತವ್ಯಕ್ಕೆ ಮುಂದಾಗುತ್ತಾಳೆ.

'ಚರಿತ್ರ ಹೀನ' ಕಥೆಯಲ್ಲಿ ಮಗಳಾದವಳು ತಂದೆಯ ಭೋಗ ಜೀವನಕ್ಕೆ ಕಡಿವಾಣ ಹಾಕಿ ಬುದ್ಧಿಯನ್ನು ಹೇಳುತ್ತಾಳೆ. ಅಂದಿನಿಂದ ರಾಜೇಂದ್ರನಾಥರು ತಾಯಿ ಮಾಯಾಳೊಂದಿಗೆ ಸುಖ ಜೀವನ ನಡೆಸುತ್ತಾರೆ.

ಎಂ.ಜಿ. ದೇಶಪಾಂಡೆಯವರ ಮತ್ತೊಂದು ಕಥೆ 'ತ್ಯಾಗ' ಇದು 'ಹೂಬಿಡದ ಗುಲಾಬಿ ಗಿಡ' ಕಥಾ ಸಂಕಲನದಲ್ಲಿ ಮೂಡಿ ಬರುವ ಕಥೆಯಾಗಿದೆ. ಗಂಡನನ್ನು ಕಳೆದುಕೊಂಡ ಒಂದು ಹೆಣ್ಣಿನ ಚಿಂತಾಜನಕ ಸ್ಥಿತಿ ಮತ್ತು ತನ್ನ ಜವಬ್ದಾರಿಗಳನ್ನು ನಿರ್ವಹಿಸಲು ಅವಳು ತನ್ನ ಸರ್ವಸ್ವವನ್ನೇ ತ್ಯಾಗ ಮಾಡಿದ ಪರಿಯನ್ನು ಇಲ್ಲಿ ಚಿತ್ರಿಸಿದ್ದಾರೆ.

ಗಂಗಾರಾವ, ರುಕ್ಮೀಣಿಗೆ ಓರ್ವಳೆ ಮಗಳು ರಮಾ ಪ್ರೀತಿಸಿದವನನ್ನೆ ಕೈಹಿಡಿದ ರಮಾ ಒಂದು ದಿನ ಶೇಖರನು ಲಾರಿಯ ಗಾಲಿಯ ಕೆಳಗೆ ಬಿದ್ದು ಸಾವನ್ನಪ್ಪಿದನು. ತಂದೆ–ತಾಯಿಗಳಿಲ್ಲದ ಶೇಖರನ ತಂಗಿಯರಾದ ಶಾರದಾ, ಮಾಲಿನಿಯರಿಗೆ ಅಣ್ಣನಿಲ್ಲದೆ ಮತ್ತಷ್ಟು ತಬ್ಬಲಿಗಳಾದರು. ಆದರೆ ರಮಾಗೆ ಮಕ್ಕಳಿರಲಿಲ್ಲ. ನಾದನಿಯರನ್ನೇ ತನ್ನ ಮಕ್ಕಳೆಂದು ತಿಳಿದು ಗಂಡನ ಜವಾಬ್ದಾರಿಯಗಳನ್ನು ತಾನು ನಿರ್ವಹಿಸಬೇಕೆಂದು ಪಣತೊಟ್ಟು ತನ್ನ ಸರ್ವಸ್ವವನ್ನೇ ತ್ಯಾಗ ಮಾಡಿದಳು. ಇದನ್ನು ಕಂಡ ರಂಗರಾವ ಮತ್ತು ರುಕ್ಮೀಣಿಯ ಕಣ್ಣುಗಳಲ್ಲಿ ನೀರು ತುಂಬಿದವು.

ಇವರ ಮತ್ತೊಂದು ಕಥೆ "ಯಾರಿಗೆ ಯಾರುಂಟು" ಈ ಕಥೆಯಲ್ಲಿ ಹೆತ್ತ ತಾಯಿಯ ಅಳಲನ್ನು ಚಿತ್ರಿಸಿದ್ದಾರೆ. ಈ ಕಥೆಯಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮುಗಿಸಿ ಕೆಲಸ ದೊರೆತ ಕೂಡಲೇ ತನ್ನ ವಯಸ್ಸಾದ ಜೀವನಕ್ಕೆ ಆಧಾರವಾಗಿ ಬರುತ್ತಾನೆ. ತನ್ನನ್ನು ನೋಡಿಕೊಳ್ಳುತ್ತಾನೆ ಎಂಬ ಆಸೆಯನ್ನು ಹೊಂದಿದ್ದ ತಿಪ್ಪವ್ವಳಿಗೆ ಮಗನಾದ ಮಲ್ಲು ಬರೆದ ಪತ್ರದಿಂದ ಅವನು ಬರುವುದಿಲ್ಲ ಎಂಬುದು ಗೊತ್ತಾಯಿತು. ಇದರಿಂದ ಆಸೆಯ ಉರಿಯುತ್ತಿರುವ ದೀಪ ನಂದಿದಂತೆ ಭಾಸವಾಯಿತು ತಿಪ್ಪವ್ವಳಿಗೆ. ಆಗ ಗ್ರಾಮದ ವಿದ್ಯಾವಂತ ಗೋಪಣ್ಣನು ನಾನು ನಿಮ್ಮ ಮಗನೆಂದು ತಿಳಿಯಿರಿ, ಅಮ್ಮಾ ಎಂದು ಹೇಳಿದ ಮಾತುಗಳು ಅವಳಿಗೆ ಸಂತಸವನ್ನು ತಂದುಕೊಟ್ಟವು. ಆದರೆ ಆಗಲೇ ಅವಳ ಪಂಜರದ ಪಕ್ಷಿ ಹಾರಿ ಹೋಗಿತ್ತು.

## ➢ ಕಥೆಗಾರರ ದೃಷ್ಟಿಯಲ್ಲಿ ಸಾಮಾನ್ಯ ವಿಷಯ:–

ಕಥೆಗಾರರ ದೃಷ್ಟಿಯಲ್ಲಿ ಈವರೆಗೆ ಕಂಡುಕೊಂಡ ಗ್ರಾಮೀಣ ಬದುಕು, ದಲಿತ ಮತ್ತು ಬಡವರ್ಗದ ಚಿತ್ರಣ ಸ್ತ್ರೀ ಸಂವೇದನೆ, ಪ್ರೀತಿ–ಪ್ರಣಯ, ಮಾನವೀಯ ಸಂವೇದನೆ ಇವುಗಳನ್ನು ಬಿಟ್ಟು ಕಥಗಾರರು ಸಾಮಾನ್ಯ ದೃಷ್ಟಿಯನ್ನು ಕುರಿತು ಬರೆದ ಕಥೆಗಳು. ಅವು ಮಧ್ಯಮ ವರ್ಗದ ಕಥೆಯಾಗಿರಬಹುದು, ಭಾವನೆಗಳ ತುಮುಲುಗಳನ್ನು ಕುರಿತು ಕಥೆಯಾಗಿರಬಹುದು, ಮುಕ್ತಿಯ ಸರ್ವಾಂಗೀಣ ಬದುಕಿಗೆ ಸಂಬಂಧಪಟ್ಟ ಕಥೆಯಾಗಿರಬಹುದು. ಇತರ ಎಲ್ಲ ಅಂಶಗಳನ್ನು ಒಳಗೊಂಡಿರುವುದೇ ಸಾಮಾನ್ಯ ದೃಷ್ಟಿಕೋನವಾಗಿದೆ.

ಎಂ.ಜಿ. ದೇಶಪಾಂಡೆಯವರ 'ಭ್ರಮೆ' ಕಥಾಸಂಕಲನದ ಕಥೆಯಾದ 'ಅಂತರಂಗ'. ಇದು ಪ್ರಜ್ಞಾನಂದ, ಊರುಫ್, ರಜನೀಶ ತನ್ನ ಹಿಂದಿನ ವೃಂತಾತದ ಕಥೆಯನ್ನು ತಿರುಗಿ ನೋಡುತ್ತಾರೆ. ರಜನೀಶ ರಾಜಕೀಯ ರಂಗದಲ್ಲಿ ದುಡಿದು, ಜನ ಹಣವನ್ನು ಸಂಪಾದಿಸಿದ. ಆದರೆ ಈತನ ಪತ್ನಿ ಕಲಾ, ಮಗಳು ಕಾಂಚನಾ ಸುಂದರ ಕುಟುಂಬ. ರಜನೀಶ ಹಣಗಳಿಸುವ ಅಮಲಿನಲ್ಲಿ ತನ್ನ

ಕುಟುಂಬದ ಬಗ್ಗೆ ನಿರ್ಲಕ್ಷ್ಯ ವಹಿಸಿದ. ಇದರ ಫಲವಾಗಿ ಹೆಂಡತಿ ಬೇರೆಯವರಿಗೆ ಅರಸಿಹೋಗಿದ್ದಳು. ಕಾಂಚನಾ ವಿಲಾಯಿತಿ ಹುಡುಗನ ಜೊತೆ ಓಡಿಹೋದಳು. ಮಗನು ಕೂಡ ಆತನಿಂದ ದೂರವಾದ ಇದನ್ನು ನೋಡಿ ರಜನೀಶ ದಿಗಂಬರನಾಗಿ ಮನೆತೊರೆದ. ಭಾವೋದ್ವೇಗದಿಂದ ಹೊರ ಬಂದಾಗ ಈತ ಪ್ರಜ್ಞಾಹೀನನಾಗಿದ್ದನು. ಪ್ರಪಂಚದಲ್ಲಿ ದುಡ್ಡೆ, ದೊಡ್ಡಪ್ಪ ಅಲ್ಲ ಅದಕ್ಕಿಂತ ಹಿಂದೆ ಇನ್ನೊಂದು ಇದೆ. ಅದುವೆ ಪ್ರೀತಿ, ವಿಶ್ವಾಸ, ಮಾನವೀಯತೆ. ಇದು ಇಲ್ಲದೆ ಹೋದರೆ ಮಾನವ ಕ್ರೂರಿಯಾಗುತ್ತಾನೆ ಎಂಬುದನ್ನು ಚಿತ್ರಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ಮೌಲಾನ ಕಾಕಾ' ಈ ಕಥೆಯಲ್ಲಿ ಹಿಂದೂ–ಮುಸ್ಲಿಂರ ಬಾಂಧವ್ಯದ ಪ್ರತೀಕವನ್ನು ಇಲ್ಲಿ ಚಿತ್ರಿಸಿದ್ದಾರೆ. ಹಿಂದು–ಮುಸ್ಲಿಂ ಎಂಬ ಕಾಕತಾಳೀಯ ಸಂಬಂಧವನ್ನು ಸ್ನೇಹವಾಗಿ ಪರಿವರ್ತನೆ ಹೊಂದಿದ್ದನ್ನು ಇಲ್ಲಿ ವಿಶ್ಲೇಷಿಸಿದ್ದಾರೆ.

ಮೌಲಾನಾ ಕಾಕಾ ಪಾತ್ರದ ಮೂಲಕ ಧರ್ಮದ ಸಮನ್ವಯವನ್ನು ಚಿತ್ರಿಸಿದ್ದಾರೆ. ಮುಸ್ಲಿಂಮರ ಮಡಿಕೆಯನ್ನು ಹಿಂದೂಗಳು ಒಡೆದದ್ದು, ಮುಸ್ಲಿಂರಲ್ಲಿ ಉದ್ವೇಗ, ಇಲ್ಲಿ ಮೌಲಾನ ಕಾಕಾ ಸಮನ್ವಯವನ್ನು ಸಾರುತ್ತಾರೆ. ಮಜಿದ್‌ನಲ್ಲಿ ಮೂತ್ರವನ್ನು ಎಸೆದುದ್ದು ಇದು ಹಿಂದೂಗಳ ಕುತಂತ್ರ ಎಂದು ತಿಳಿಯುತ್ತಾರೆ. ಈ ಜಗಳ ಉಗ್ರ ರೂಪ ತಾಳುತ್ತದೆ. ಮೌಲಾನಾ ಕಾಕಾ ಎಷ್ಟು ಹೇಳಿದರು ಇವರು ಕೇಳುವುದಿಲ್ಲ. ಕೊನೆಗೆ ಗುಡಿಸಲಿಗೆ ಬೆಂಕಿ ಬೀಳುತ್ತದೆ. ಮೂರುಹಿಂದೂಗಳ ಗುಡಿಸಲು, ಮೂರು ಮುಸ್ಲಿಂಮರ ಗುಡಿಸಲು ಸುಡುತ್ತದೆ. ಆಗ ಈವರಿಗೂ ಬೇರೆಯವರ ಕುತಂತ್ರ ಎಂದು ಗೊತ್ತಾಗುತ್ತದೆ. ಘಟನೆ ನಡೆದ ಸ್ಥಳಕ್ಕೆ ಪೊಲೀಸರು ಬಂದಾಗ ಇದು ಬೆರೆಯಾರೋ ಕಿಡಿಗೇಡಿ ಪುಡಾರಿಗಳ ಕೆಲಸ ಎಂದು ಹೇಳುತ್ತಾರೆ. ಪರಸ್ಪರರಲ್ಲಿ ಭ್ರಾತೃತ್ವ ಭಾವನೆ ಬೆಳೆಯುತ್ತದೆ. ಎಲ್ಲವು ಸುಖಾಂತ್ಯವಾಗುವ ಸಂದರ್ಭದಲ್ಲಿ ಮೌಲಾನಾ ಕಾಕಾ ಮರಣವನ್ನಪ್ಪುತ್ತಾರೆ. ಹಿಂದು ಮತ್ತು ಮುಸ್ಲಿಂರು ಇಬ್ಬರು ನೊಂದುಕೊಳ್ಳುತ್ತಾರೆ. "ಧರ್ಮಕ್ಕಿಂತಲೂ ಮಾನವೀಯತೆಯ ಮೌಲ್ಯಗಳು ದೊಡ್ಡದು" ಎಂದು ಅರ್ಥವಾಗುತ್ತದೆ.

ಎಂ.ಜಿ. ದೇಶಪಾಂಡೆಯವರ 'ಮೌನ ರಾತ್ರಿ' ಕಥೆಯಲ್ಲಿ ಸಂಬಂಧಗಳ ತಳಮಳವನ್ನು ಇಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಬರುವ ಪಾತ್ರ ಅಂಜಲಿ ಮತ್ತು ವೆಂಕಟೇಶ. ಅಂಜಲಿ ಚಿಕ್ಕಂದಿನಿಂದಲೇ ತಂದೆ–ತಾಯಿಯನ್ನು ಕಳೆದುಕೊಂಡು ಅಣ್ಣನ ಆಶ್ರಯದಲ್ಲಿ ಬೆಳೆದವಳು, ಒಂದು ದಿನ ಹಣ ಗಳಿಸಲು ಮುಂಬೈಗೆ ಹೋದ ಅಣ್ಣ ಬರಲಿಲ್ಲ. ಅಣ್ಣ ವಿಳಾಸವನ್ನು ಹುಡುಕೊಂಡು ಅಂಜಲಿ ಗುಲಬರ್ಗಾಕ್ಕೆ ಬಂದು ಅಣ್ಣನ ವಿಳಾಸ ಹುಡುಕತೊಡಗಿದಳು. ಆಟೋದಲ್ಲಿಯೇ ಒಬ್ಬ ವ್ಯಕ್ತಿಯಪರಿಚಯವಾಯಿತು. ಆ ವ್ಯಕ್ತಿಯ ಜೊತೆಗೆ ಹೋಟೆಲಲ್ಲಿ ಉಳಿದುಕೊಳ್ಳುತ್ತಾಳೆ. ಆ ಮನುಷ್ಯ ಒಂದು ಪತ್ರ ಬರೆದು ಅಲ್ಲಿಂದ ಹೊರಟುಹೋದ. ಇದನ್ನು ಓದಿದ ಅಂಜಲಿಯ ಕಣ್ಣೀರು ಧಾರೆಯಾಗಿ ಹರಿದವು. ಕಾರಣ ಆತ ಅವಳ ಅಣ್ಣನಾಗಿದ್ದನು.

ಎಂ.ಜಿ. ದೇಶಪಾಡೆಯವರ "ಶ್ರಾವಣಿ" ಕಥಾಸಂಕಲನದಲ್ಲಿಯ ಕಥೆ 'ಸಂಬಂಧ' ಈ ಕಥೆಯಲ್ಲಿ ಸೃಜನಶೀಲವಾದ' ಕಲ್ಪನೆಯನ್ನು ಕಾಣುತ್ತೇವೆ. ಸಂಬಂಧಗಳ ನೆಲೆ-ಬೆಲೆಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಮಾನವೀಯತೆಯುಳ್ಳ ಮನುಷ್ಯ ಸದಾ ಪವಿತ್ರವಾದುದ್ದು ಎಂಬುದು ಚೇತನ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಹೆಣ್ಣಿನಲ್ಲಿರುವ ಮನೋವೈಜ್ಞಾನಿಕ ಅಭಿಲಾಷೆಗಳನ್ನು ಕಲಾಳ ಮುಖಾಂತರ ಚಿತ್ರಿಸಿದ್ದಾರೆ. ಹಾಗೆಯೇ ಅಂತರಂಗ ಶುದ್ಧಿ ಇಲ್ಲದ ಪಾತ್ರ ಸುಜಾತಾಳದು.

ಚೇತನ ಒಬ್ಬ ಉಪನ್ಯಾಸಕರಾಗಿದ್ದರು. ತಮ್ಮ ನೌಕರಿಗಾಗಿ ಸುಜಾತಾಳ ಜೊತೆ ಮದುವೆಯಾಗುತ್ತಾರೆ. ಸುಜಾತ ನೋಡಲು ಸುಂದರಿಯಾಗಿರಲಿಲ್ಲ. ಆದರೂ ಚೇತನ ಹೊಂದಿಕೊಂಡು ಹೋದರು. ಕಾಲೇಜಿನಲ್ಲಿ ಕಲಾ ಎನ್ನುವ ಹದಿನೆಂಟು ವರ್ಷದ ಹುಡುಗಿ, ಚೇತನರಿಗೆ ಆಕರ್ಷಕ್ಕೆ ಒಳಗಾದಳು. ಏನೋ ಒಂದು ಹುಚ್ಚು ಕಲ್ಪನೆಯಲ್ಲಿ ತೇಲಾಡುತ್ತಿದ್ದಳು. ಒಂದು ದಿನ ಕಲಾ ಉಪನ್ಯಾಸಕರ ಮನೆಗೆ ಬರುತ್ತಾಳೆ. ಆಗ ಉಪನ್ಯಾಸಕರ ಹೆಂಡತಿ ಅವರ ಮೇಲೆ ಸಂಶಯ ಪಡುತ್ತಾಳೆ. ಮತ್ತೆ ಒಂದು ದಿನ ಮಳೆ ಬಂದಾಗ ಕಲಾಳ ಮನೆಯಲ್ಲಿ ತಂಗುತ್ತಾರೆ. ಮನೆಗೆ ತಡವಾಗಿ ಬಂದಾಗ ಸುಜಾತಾ ವಿಚಾರಿಸಿದಾಗ ಕಲಾಳ ಮನೆಗೆ ಹೋಗಿದ್ದಾಗಿ, ಹೇಳಿದರೂ ಸುಜಾತಾಗೆ ಮತ್ತಷ್ಟು ಪ್ರಚೋದನೆ ಕೊಟ್ಟಂತಾಯಿತು. ಅವಳು ಗಂಡನ ಮೇಲೆ ಕಿಡಿಕಾರುತ್ತಾಳೆ. ಚೇತನ ಕಲಾಳಿಗೆ ಒಂದು ಪತ್ರವನ್ನು ಬರೆದು ನೀನು ನನ್ನ ತಂಗಿಯ ಹಾಗೆ ಎಂದಾಗ ಕಲಾಳು ಕಣ್ಣೀರು ಹರಿಸಿದಳು. 'ಮಾನವನ ಸೂಕ್ಷ್ಮ ಸಂಬಂಧವನ್ನು ಇಲ್ಲಿ ವಿಶ್ಲೇಷಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ಪ್ರಳಯ' ಎಂಬ ಕಥೆಯಲ್ಲಿ ನಿಸರ್ಗದ ಜೊತೆ ನಾವು ಏನಾದರು ಆಟವಾಡಿದರೆ ಅದು ವಿಕೋಪಕ್ಕೆ ಹೋಗುತ್ತದೆ. ಎಂಬ ಚಿತ್ರಣವನ್ನು ಕಾಣುತ್ತೇವೆ. ಹಿಂದಿನ ಒಂದು ಘಟನೆಯನ್ನು ಮೇಲುಕು ಹಾಕಿದಾಗ ಜಪಾನ ದೇಶದ ಪ್ರಳಯ ಇಡೀ ವಿಶ್ವವನ್ನೆ ನಡುಗಿಸುವ ಘಟನೆಯಾಗಿದೆ. ಆದರೆ ಈ ಕಥೆಯಲ್ಲಿ ಸಂಬಂಧಗಳಿಗೆ ಮೋಸ ಮಾಡಿದರೆ ಅಲ್ಲಿ ಅವನತಿ ಖಂಡಿತ ಎನ್ನುವ ಚಿತ್ರಣವನ್ನು ಕಾಣುತ್ತೇವೆ.

ಇಲ್ಲಿ ಬರುವ ಪಾತ್ರಗಳು ಕೊಟ್ರಪ್ಪ, ಬಸಣ್ಣ, ಪಾರ್ವತಿ, ಲತಾ ಈ ಪಾತ್ರಗಳು ಮೂಲಕ ಪ್ರಳಯವನ್ನು ಹೆರೆದಿದ್ದಾರೆ. ಕೊಟ್ರಪ್ಪನ ಹೆಂಡತಿ ಪಾರ್ವತಿ, ಮಗ ಬಸಣ್ಣ, ಕೊಟ್ರಪ್ಪ ಒಬ್ಬನೆ ಮಗ ಎಂದು ಓದಲು ನಗರಕ್ಕೆ ಕಳಿಸುತ್ತಾನೆ. ಕೆಲವು ದಿನ ಒಳ್ಳೆಯವನಾಗಿರದ ಬಸಣ್ಣ ನಂತರದ ದಿನಗಳಲ್ಲಿ ಆತ ದುಶ್ಚಟಕ್ಕೆ ಬಲಿಯಾಗುತ್ತಾನೆ. ತಂದೆ ಅವನನ್ನು ನೋಡಲು ಹಾಸ್ಟೆಲ್‌ಗೆ ಬಂದಾಗ ಆತ ಜೂಜಾಡುವುದನ್ನು ಕಂಡು ಹೌಹಾರುತ್ತಾನೆ. ಮಗ ಈಗ ಮಗನಾಗಿ ಉಳಿದಿಲ್ಲ. ಎಂದು ಪಾರ್ವತಿಗೆ ಹೇಳುತ್ತಾನೆ. ಮತ್ತೆ ಒಂದು ದಿನ ಬಸಣ್ಣ ಒಂದು ಹೆಣ್ಣಿನ ಜೊತೆ ಮನೆಗೆ ಬರುತ್ತಾನೆ. ಯಾರು ಎಂದು ಪ್ರಶ್ನಿಸಿದರೆ ಹೆಂಡತಿ ಎಂದು ಹೇಳುತ್ತಾನೆ. ಕೊಟ್ರಪ್ಪ ಕುಸಿದು ಬೀಳುತ್ತಾನೆ.

ಅವರಿಬ್ಬರನ್ನು ತಾಯಿ ಬರಮಾಡಿಕೊಳ್ಳುತ್ತಾಳೆ. ಲತಾ ಬಂದಾಗಿನಿಂದ ಮನೆಯಲ್ಲಿ ಸುಖದ ವಾತಾವರಣ ಅನಿಸುತ್ತದೆ. ಆದರೆ ಈ ಸಂತೋಷ ಬಹಳ ದಿನ ಉಳಿಯಲಿಲ್ಲ. ಲತಾ ಕೃಷ್ಣಗೌಡನ

ಬಲಿಗೆ ಬೀಳುತ್ತಾಳೆ. ಗೌಡ ಕೊಟ್ರಪ್ಪನ ಹೊಲವನ್ನು ವಶಪಡಿಸಿಕೊಂಡು ಸೊಸೆಯನ್ನು ಕೂಡ ಬಲೆಗೆ ಹಾಕಿಕೊಳ್ಳುತ್ತಾನೆ. ಇದನ್ನು ತಿಳಿದ ಪಾರ್ವತಿಗೆ ದಿಗ್ಭ್ರಮೆ ಅನಿಸುತ್ತದೆ. ತಪ್ಪು ಮಾಡಿದರು ಅವಳಿಗೆ ಅಪರಾಧ ಭಾವನೆ ಬರಲಿಲ್ಲ. ಒಂದು ದಿನ ಯಾತ್ರಕ್ಕೆಂದು ಕೃಷ್ಣಗೌಡ, ಲತಾ ಹೋಗುವಾಗ ಚಾಮುಂಡಿ ಬೆಟ್ಟದಿಂದ ಬಸ್ಸು ಉರುಳಿ ಬಿತ್ತು ಎಂದು ಹೇಳಿದಾ. "ಕೊಟ್ರಪ್ಪನ ತಾನ ತಿಳ್ಕೊಂಡ ಪ್ರಳಯ ಆಗಿ ಮುಗಿದು ಹೋಯಿತು".[೧೩] ಎಂದು ಹೆಮ್ಮೆಪಟ್ಟನು. ಮಾನವನೆ ಪ್ರಕೃತಿಯ ವಿರುದ್ಧ ಹೋದರೆ ನಿನ್ನ ಪ್ರಳಯ ಖಂಡಿತ ಎಂದು ಚಿತ್ರಿಸಿದ್ದಾರೆ.

ಎಂ.ಜಿ. ದೇಶಪಾಂಡೆಯವರ 'ಯಾರು ಹಿತವರು' ಈ ಕಥೆಯಲ್ಲಿ ಬೆಳೆಯುವ ಮಕ್ಕಳ ಭಾವನೆಗಳು ಝೂಜಾಟ ಎಂದು ಹೇಳಿದ್ದಾರೆ. ಬೆಳೆಯುವ ಮಕ್ಕಳ ಮನಸ್ಸು ಹೂವಿನ ಮೊಗ್ಗು ಇದ್ದ ಹಾಗೆ ಅದನ್ನು ಅರಳಿಸುವ ಕೆಲಸ ದೊಡ್ಡವರದಾಗಿರುತ್ತದೆ. ಇವರ ಬೆಳವಣಿಗೆಗೆ ತಂದೆ-ತಾಯಿ-ಗುರುಗಳ ಪಾತ್ರ ಕೂಡ ಮಹತ್ವದ್ದಾಗಿರುತ್ತದೆ.

ಇಲ್ಲಿ ಬರುವ ಪಾತ್ರ ಶಾಮರಾಯ, ಸುಂದರಮ್ಮಾ, ನೀಲಾ, ಮಹೇಶ, ರತಿಕಾಂತ ಈ ಪಾತ್ರದ ಮೂಲಕ ಕಥೆಯನ್ನು ವಿಶ್ಲೇಷಿಸುತ್ತಾ ಹೋಗಿದ್ದಾರೆ. ಶಾಮರಾಯ, ಸುಂದರಮ್ಮಾ, ನೀಲಾಳ ತಂದೆ-ತಾಯಿ. ನೀಲಾ ನಮ್ಮ ಕಥೆಯ ನಾಯಕಿ. ರತಿಕಾಂತ ಶಿಕ್ಷಕ. ಮಹೇಶ, ನೀಲಾಳ ಜೊತೆ ಆಡುವ ಸಹಪಾಠಿ. ನೀಲಾ ಋತುಮತಿಯಾದ ನಂತರ ಆಕೆಯ ಅಂಗಾಂಗದಲ್ಲಿ ಬದಲಾವಣೆಯನ್ನು ಕಂಡು ವಿಸ್ಮಯಗೊಳ್ಳುತ್ತಾಳೆ. ಅಂತಹದರಲ್ಲಿ ರತಿಕಾಂತ ಆಕೆಯನ್ನು ಮದುವೆಯಾಗಲು ಕೇಳಿದಾಗ ಅವಳಿಗೆ ಆಶ್ಚರ್ಯ ಹಾಗೂ ದಿಗ್ಭ್ರಮೆಗೆ ಒಳಗಾಗುತ್ತಾಳೆ. ಒಂದು ದಿನ ನೀಲಾಳನ್ನು ಹೂದೋಟಕ್ಕೆ ಕರೆದಾಗ ನೀಲಾ ನಿರಾಕರಿಸಿದಳು. ನಂತರ ಮನಸ್ಸಿನ ತಳಮಳದಿಂದ ಅವಳು ಹೂದೋಟಕ್ಕೆ ಹೋದಳು. ಜೊತೆಗೆ ಮಹೇಶ ಕೂಡ ಹೋದ. ರತಿಕಾಂತನನ್ನು ಕಂಡು ಉದ್ವೇಗದಿಂದ ನೀಲಾಳನ್ನು ಬಲಾತ್ಕಾರ ಮಾಡಲು ಪ್ರಯತ್ನಿಸಿದಾಗ, ರತಿಕಾಂತ ರಕ್ಷಿಸಲು ಹೋದಾಗ, ರತಿಕಾಂತನನ್ನು ಮಹೇಶ ಕೊಲೆ ಮಾಡುತ್ತಾನೆ. ಮರುದಿನ ಪೊಲೀಸ್ ಬಂದು ವಿಚಾರಿಸುವಾಗ ಮಹೇಶ ಮಾತ್ರ ಏನು ಅರಿಯದ ಹಾಗೆ ನೋಡುತ್ತಿದ್ದ. ಮಕ್ಕಳಿಗೆ ಯಾವಾಗಲೂ ವಯಸ್ಸಿಗೆ ಮೀರಿದ ಯೋಚನೆಯನ್ನು ತಲೆಯಲ್ಲಿ ಹಾಕಬಾರದು, ಭಾವೋದ್ವೇಗಕ್ಕೆ ಒಳಗಾಗಿ ಅವರು ಅನಾಹುತಕ್ಕೆ ಕಾರಣರಾಗುತ್ತಾರೆ.

ಎಂ.ಜಿ. ದೇಶಪಾಂಡೆಯವರ 'ಗುಡಿಸಲಿನಲ್ಲಿ' ಕತೆಯಲ್ಲಿ ಗುಡಿಸಲಿನ ಬದುಕಿನ ಚಿತ್ರಣ ಹಾಗೂ ಅವರ ಆಶೆಯ ಗೋಪುರ ಕಟ್ಟುತ್ತಿರುವಾಗಲೇ ಅದು ಬಿದ್ದು ಹೋಗುತ್ತದೆ.

---

೧೩. ಶ್ರಾವಣಿ 'ಪ್ರಳಯ' ಕಥೆಗಾರರು ಎಂ.ಜಿ. ದೇಶಪಾಂಡೆ ಪುಟ ಸಂಖ್ಯೆ ೬೯

ಇಲ್ಲಿ ಬರುವ ಪಾತ್ರ ಗುಳ್ಯಾ, ಮೈಸಾ, ನಾಯಕ, ಪಾರ್ಥಸಾರಥಿ ಈ ಪಾತ್ರದ ಮೂಲಕ ಕಥೆ ವಿಶ್ಲೇಷಿಸಿದ್ದಾರೆ. ರಸ್ತೆಯಲ್ಲಿ ಹಿರಿಯ ನಾಯಕ ಪಾರ್ಥಸಾರಥಿ ಬಂದಾಗ ಗುಳ್ಯಾ ತಮ್ಮ ಜೀವನಕ್ಕಾಗಿ ಏನಾದರು ಕೇಳಬೇಕೆಂಬ ಆಸೆ ಹೊತ್ತಾಗ ಆತನ ಹೆಂಡತಿ ಔಪಚಾರಿಕ ಮಾತು ಹೇಳುತ್ತಾಳೆ. ನಾವು ದುಡಿಯುವವರೆಗೂ ನಮ್ಮ ಅನ್ನ ನಮಗೆ ಸಿಗುವುದಿಲ್ಲ ಎಂದು ಎರಡು ವರ್ಷದ ನಂತರ ಶೇರು ಹಗರಣದಲ್ಲಿ ಸಿಕ್ಕಿ ಬಿದ್ದ ಪಾರ್ಥಸಾರಥಿ, ನಾಯಕ ಜೇಲು ಪಾಲಾದ ಸುದ್ದಿ ತಿಳಿಯುತ್ತಲೆ ಮೈಸಾ ನಗುತ್ತಾಳೆ. ಗುಳ್ಯಾ ಮೌನವಾಗಿರುತ್ತಾನೆ.

'ಸಂಶೋಧನೆ' ಕಥೆಯಲ್ಲಿ ನಿಜವಾದ ಸಂಶೋಧಕನಿಗೆ ಇರಬೇಕಾದ ಪ್ರಾಮಾಣಿಕ ಗುಣವನ್ನು ಎತ್ತಿ ತೋರಿಸಿದ್ದಾರೆ. ಶಶಿಧರನ ಸಂಸಾರ ಊಟಕ್ಕೆ ಗತಿ ಇಲ್ಲದೆ ನರಳುತ್ತಿತ್ತು. ಔಷಧದ ಅಂಗಡಿಯಲ್ಲಿ ಕೊಡುವ ಸಂಬಳ ಸಾಕಾಗುತ್ತಿರಲಿಲ್ಲ. ರಾಸಾಯನ ಶಾಸ್ತ್ರದಲ್ಲಿ ಎಂ.ಎಸ್ಸಿ. ಮುಗಿಸಿ ಪ್ರಥಮ ರ‍್ಯಾಂಕ ಪಡೆದರು. ಕ್ಯಾನ್ಸರ್ ರೋಗಕ್ಕೆ ಔಷಧವನ್ನು ಸಂಶೋಧಿಸಿದರು. ಇದನ್ನು ತಿಳಿದು ಕೆಲವು ಪುಡಾರಿಗಳು ಇವರಿಗೆ ಹಣದ ಆಮಿಷ ತೋರಿಸಲು ಬಂದಾಗ ಅವರು ಪ್ರಮಾಣಿಕತೆಯಿಂದ ಮೆರೆದರು. ಮತ್ತೆ ಬಡತನ ಕಾಡತೊಡಗಿತ್ತು. ಇದು ಒಬ್ಬ ಸಂಶೋಧಕನ ನಿಜವಾದ ಲಕ್ಷಣವಾಗಿದೆ.

ಎಂ.ಜಿ. ದೇಶಪಾಂಡೆಯವರ 'ರಸ ನಿಮಿಷ' ಕಥೆಯಲ್ಲಿ ಒಂದು ಕ್ಷಣ ತನ್ನ ಮನಸ್ಸಿನಲ್ಲಿ ಉಂಟಾದ ಭಾವನೆಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ಇಲ್ಲಿ ಬರುವ ಪಾತ್ರ ರವಿ ಈತನು ಬಸ್ಸಿನಲ್ಲಿ ಪ್ರಯಾಣಿಸುವಾಗ ಆತ ಒಂದು ಸೀಟು ಕಾಯ್ದಿರಿಸಿದ. ತನ್ನವರು ಯಾರಾದರು ಬರಬಹುದು ಎಂದು. ಯಾರು ಬರದೆ ಹೋದಾಗ ಆ ಸೀಟು ಸುಂದರ ಹುಡುಗಿಗೆ ಕೊಡುತ್ತಾನೆ. ಅವಳ ಸೌಂದರ್ಯವನ್ನು ಕಂಡು ಮೋಹಕಗೊಳ್ಳುತ್ತಾನೆ. ಆಕೆಯನ್ನು ಮದುವೆ ಮಾಡಿಕೊಳ್ಳಲು ನಿರ್ಧರಿಸುತ್ತಾನೆ. ಬಸ್ ನಿಂತಾಗ ವಯಸ್ಸಾದ ಮುದುಕಿ, 'ತಮ್ಮ ಛಂದು ಕೂಡು' ಎಂದಾಗ ರವಿ ವಾಸ್ತವಕ್ಕೆ ಬರುತ್ತಾನೆ. ಒಂದು ಕ್ಷಣದ ಭಾವನೆಗಳ ಹೊಯ್ದಾಟವನ್ನು ಇಲ್ಲಿ ಚಿತ್ರಿಸಿದ್ದಾರೆ.

ಎಂ.ಜಿ. ದೇಶಪಾಮಡೆಯವರ 'ಪಾರಿಜಾತ' ಕಥೆಯಲ್ಲಿ ಒಂದು ವಿಶಿಷ್ಟ ರೀತಿಯ ವರ್ಣನೆಯನ್ನು ಕಾಣುತ್ತೇವೆ. 'ಹೂ' ನೋಡಲು ಎಷ್ಟು ಸುಂದರ. ಅದನ್ನು ಅನುಭೋಗಿಸಲು ಸಾಧ್ಯವಿಲ್ಲ. ಹಾಗೆಯೇ ಪಾರಿಜಾತ (ನರ್ತಕಿ) ನೀನು ಕೂಡ ಭೋಗದ ವಸ್ತು ಅಲ್ಲ. ಸ್ವರ್ಗದಲ್ಲಿ ಇರುವ ಸುಂದರ 'ಹೂ' ನಿನ್ನ ಅನುಭವಿಸಲು ಆಗುವುದಿಲ್ಲ ಎಂದು ರಾಜ ಹೇಳುತ್ತಾನೆ. ಕಲೆ ಎನ್ನುವುದು ಅನುಭವಿಸಲು ಬರುವುದಿಲ್ಲ. ಅದನ್ನು ಕಣ್ಣಿನಿಂದ ನೋಡಿ ಆನಂದಿಸಬೇಕು.

ಎಂ.ಜಿ. ದೇಶಪಾಂಡೆಯವರ 'ಕರಗಿದ ಮೋಡ' ಕಥೆಯಲ್ಲಿ ಸಾಮಾನ್ಯವಾಗಿ ನಡೆಯುವ ದುರ್ಘಟನೆಯ ಬಗ್ಗೆ ವಿಶ್ಲೇಷಿಸಿದ್ದಾರೆ. ಬರುವ ಪಾತ್ರಗಳು ಕೀರ್ತಿ, ಕಿರಣ, ಕೈಲಾಸ ಇವರು

ರಜನಿಕಾಂತನ ಮಕ್ಕಳು. ವೈದೇಹಿ ಅವರ ಹೆಂಡತಿ ದೀಪಾವಳಿ ಹಬ್ಬಕ್ಕೆಂದು ಮಗಳು ಅಳಿಯರನ್ನು ಕರೆದುಕೊಂಡು ಬರಬೇಕೆಂದು ಬೆಂಗಳೂರಿಗೆ ಹೊಗುತ್ತಿರುವ ರೈಲು ಅಪಘಾತದಲ್ಲಿ ಮರಣವನ್ನಪ್ಪಿದವರ ಪಟ್ಟಿಯಲ್ಲಿ ರಜನಿಕಾಂತನ ಹೆಸರಿತ್ತು. ಅವರ ಅಂತ್ಯಕ್ರಿಯೆ ಮಾಡುತ್ತಾರೆ. ದೀಪಾವಳಿ ಹಬ್ಬ ಬಂತೆಂದರೆ ರಜನಿಕಾಂತನ ನೆನಪು ಕಾಡತೊಡಗುತ್ತದೆ. ಅಂದು. ಅಪರಿಚಿತ ವ್ಯಕ್ತಿಯೊಬ್ಬ ಎದುರು ಬಂದು ನಿಂತಾಗ ಅದು ರಜನಿಕಾಂತರಾಗಿದ್ದರು.

ಇವರ ಮತ್ತೊಂದು ಕತೆ 'ಕಥೆಗಾರ' ಈ ಕಥೆಯಲ್ಲಿ ರಾಕೇಶ ಎಂಬುವನು ಒಬ್ಬ ದೊಡ್ಡ ಕಥೆಗಾರ. ಆತನ ಬದುಕಿನ ನೋವೆ ಒಂದು ಕಥೆಯಾಗಿಸುತ್ತದೆ. ಹೇಮಾ ಅನ್ನುವ ಹುಡುಗಿಯನ್ನು ಮದುವೆಯಾಗಲು ಯೋಚಿಸಿದ್ದ. ಆದರೆ ಹೇಮಾ ಬೇರೊಬ್ಬನ ಮಡದಿಯಾಗಿದ್ದಳು. ಇದನ್ನು ತಿಳಿದ ಲೇಖಕ ದಿಗಿಲುಗೊಂಡ ಕಥೆಗಾರ ಕತೆಯನ್ನು ಸೃಷ್ಟಿಸಲು ಹೋದಾಗ ಸ್ವತಹ ಆತನೆ ಒಂದು ಕತೆಯಾಗಿಬಿಟ್ಟ.

ಎಂ.ಜಿ. ದೇಶಪಾಡೆಯವರ 'ಪಪ್ಪಾ' ಕಥೆಯಲ್ಲಿ ತಂದೆಯಾದವನು ತನ್ನ ಕರ್ತವ್ಯವನ್ನು ಮರೆತಾಗ ಮಕ್ಕಳಲ್ಲುಂಟಾಗುವ ಭಾವನೆಗಳ ಗೊಂದಲವನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಶೇಖರನ ತಂದೆ ದಿನವಿಡಿ ಎಲ್ಲರ ಜೊತೆ ನಕ್ಕುನಲಿದು ಮನೆಗೆ ಬರುವಾಗ ಮದ್ಯ ಸೇವಿಸಿ ಬಂದು ಅಮ್ಮನ ಜೊತೆ ಜಗಳವಾಡುತ್ತಿದ್ದ. ಉಮೇಶನ ತಂದೆ-ತಾಯಿಗಳು ಉಮೇಶನ ವಿದ್ಯಾಭ್ಯಾಸ ಮಾತ್ರ ಅಲ್ಲ ಅವನ ಜೀವನದ ಆಗು ಹೋಗುಗಳನ್ನು ಕೂಡ ವಿಶ್ಲೇಸುತ್ತಿದ್ದರು. ಶೇಖರನ ತಂದೆಗೆ ಮನೆಯನ್ನುವುದು ತಂಗುದಾಣವಾಗಿತ್ತು. ತಂದೆ ಕುಡಿದು ಬಂದು ಅಮ್ಮನ ಜೊತೆ ಜಗಳವಾಡುತ್ತಿದ್ದಾಗ ಶೇಖರನ ಭಾವನೆಗಳು ಸುಟ್ಟುಹೋದವು.

ಇವರ ಮತ್ತೊಂದು ಕಥೆ 'ಶಿವಾಲಿ' ಈ ಕಥೆಯಲ್ಲಿ ಮಾನವೀಯ ಕಳಕಳಿಯನ್ನು ಚಿತ್ರಿಸಿದ್ದಾರೆ.

ಸಲೀಮನಿಗೆ ಗಣೇಶ ಮೂರ್ತಿ ತಯಾರಿಸಿ ಮಾರುವದೆಂದರೆ ಎಲ್ಲಿಲ್ಲದ ಸಂತೋಷವಾಗುತ್ತಿತ್ತು. ಇಸ್ಲಾಂ ಹಾಗೂ ಮುಸ್ಲಿಂ ಕ್ರೈಸ್ತ ಧರ್ಮಗಳ ಹಬ್ಬದಂತೆ ಹಿಂದೂ ಧರ್ಮ ಎಂದರೆ ಎಲ್ಲಿಲ್ಲದ ಪ್ರೀತಿ. ಸಲೀಮನು ಗಣೇಶನ ಸುಂದರ ಮೂರ್ತಿಯನ್ನು ಮಾಡಿ ಮಾರಾಟ ಮಾಡುತ್ತಿದ್ದ. ಅವನನ್ನು ಪ್ರೀತಿಯಿಂದ 'ಶಿವಾಲಿ' ಎಂದು ಕರೆಯುತ್ತಿದ್ದರು. ಗಣೇಶನನ್ನು ಹಳ್ಳಕ್ಕೆ ಬಿಡುವಾಗ ಸಲೀಮನ ಕುಟುಂಬ ದುಃಖ ಪಡುತ್ತಿತ್ತು. ಹೀಗೇಕೆ, ಅವನ ಪ್ರಶ್ನೆಗಳಿಗೆ ಉತ್ತರವೆಲ್ಲಿ?.

# ಅಧ್ಯಾಯ ೬.

## ಭಾಷೆ ಶೈಲಿ

ವ್ಯವಹರಿಸುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ
ವಿವಿಧಾಕಾರಂ ಲಿಪಿ ಭೇದ ವೃತ್ತಿಯಿಚಿದ ಚಾಕ್ಷುಷಂ ಪುರಾತನಮತದಿಂ

(ಶಬ್ದ ಮಣಿ ದರ್ಪಣ ಸೂತ್ರ – ೧೩)

"ಧ್ವನಿ ರೂಪದಲ್ಲಿ 'ಶ್ರವಣ' ಅಂದರೆ ಶ್ರವಣೇಂದ್ರಿಯವಾದ ಕಿವಿಗೆ ಕೇಳಿಸುವ ಮತ್ತು ಆಕೃತಿಯ ರೂಪದಲ್ಲಿ 'ಚಾಕ್ಷುಷ' ಅಂದರೆ ಕಣ್ಣಿಗೆ ಕಾಣಿಸುವ ವ್ಯವಸ್ಥೆ ಮಾತ್ರ ಶುದ್ಧಾಕ್ಷರ ಅಥವಾ ಭಾಷೆ ಎಂಬುವ ಕೇಶಿರಾಜನ ಹೇಳಿಕೆಯಾಗಿದೆ"[1]

" ಮನುಷ್ಯನಿಗೆ ಒಂದು ಸಮೂಹ ಮಾಧ್ಯಮದಂತೆ ಕೆಲಸ ಮಾಡುವುದು ಭಾಷೆಯಾಗಿದೆ. ಸಂಕೇತಗಳ ಮೂಲಕ ಭಾಷೆಯನ್ನು ಬಳಸಬಹುದು. ಆದರೆ ಸಂಕೇತಗಳಿಂದ ಭಾಷೆ ಎಲ್ಲವು ಹೇಳಲು ಸಾಧ್ಯವಿಲ್ಲ. ಬಾಯಾರಿಕೆಯಾದರೆ ನೀರು ಬೇಕೆಂದು ಹೇಗೋ ಸನ್ನೆ ಮಾಡಿ ತೋರಿಸಬಹುದು. ಆದರೆ ಕಾಫೀ ಬೇಕು ಎಂದು ಹೇಗೆ ಹೇಳುವುದು. ಒಂದು ವೇಳೆ ಸನ್ನೆಗಳಿಂದ ಕಾಫೀ ಬೇಕೆಂದು ಹೇಳಿದ್ದರೂ ಕೂಡ ಸಕ್ಕರೆ ಇಲ್ಲದ ಕಾಫಿ ಬೇಕು ಎಂದು ತಿಳಿಸುವುದು ಕಷ್ಟವಾಗುವುದು. ಆದ್ದರಿಂದ ಭಾಷೆಯು ಅತಿ ಅವಶ್ಯವಾದುದು. 'ಐಸ್ಲರ್'– 'ಮನಸ್ಸಿನಲ್ಲಿರುವ ಯಾವುದೇ ಪ್ರಾಣಿಯ ಅನುಭುವಗಳ ಅಭಿವ್ಯಕ್ತಿಯೇ ಭಾಷೆ' ಎಂದಿದ್ದಾರೆ".[2]

ಭೌಗೋಳಿಕ ಪ್ರದೇಶ ಸಾಮಾಜಿಕ ಸಾಂಸ್ಕೃತಿಕ ಅಂಶಗಳ ಪರಿಭಾಷಾ ಪ್ರಭಾವ ಇವುಗಳಿಂದ ಕನ್ನಡ ಭಾಷೆಯಲ್ಲಿ ಉಪಭಾಷೆಗಳು ಪ್ರಭೇದ ಭಾಷೆಗಳು ಹುಟ್ಟಲು ಕಾರಣವಾದವು. ಪ್ರದೇಶಿಕವಾಗಿ ತುಂಗಭದ್ರಾ ನದಿಯ ಉತ್ತರ ಭಾಗದ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನು ಉತ್ತರ ಕರ್ನಾಟಕದ ಕನ್ನಡ ಭಾಷೆ ಎಂದು , ದಕ್ಷಿಣ ಭಾಗದ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನು ದಕ್ಷಿಣ ಕರ್ನಾಟಕದ ಕನ್ನಡ ಎಂದು ಸ್ಥೂಲವಾಗಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು.

ಕರಾವಳಿಯ ಭಾಗದ ಕನ್ನಡ ಭಾಷೆಯ ದಕ್ಷಿಣ ಕರ್ನಾಟಕದ ಕನ್ನಡಕ್ಕಿಂತ ಭಿನ್ನವಾಗಿ ತೋರುವುದರಿಂದ ಅದನ್ನು ಪ್ರತ್ಯೇಕಿಸಿ ಹೇಳಬಹುದಾಗಿದೆ. ಹಾಗೆಯೇ ಉತ್ತರ ಕರ್ನಾಟಕದ ಕನ್ನಡ ಭಾಷೆಯಲ್ಲಿ ಹೈದ್ರಾಬಾದ ಕರ್ನಾಟಕ ಪ್ರದೇಶದ ಭಾಷೆ ಉಳಿದ ಭಾಗದಲ್ಲಿ ಬಳಕೆಯಲ್ಲಿರುವ ಕನ್ನಡಕ್ಕಿಂತ ಭಿನ್ನವಾಗಿ ತೋರುತ್ತದೆ. ಹೈದ್ರಾಬಾದ ಕರ್ನಾಟಕ ಪ್ರಾದೇಶಿಕ ಭಾಷೆಗಳು, ಬೀದರ ಕನ್ನಡ, ಕಲ್ಬುರ್ಗಿ ಕನ್ನಡ, ರಾಯಚೂರ ಜಿಲ್ಲೆಗಳ ಪ್ರದೇಶಗಳವರೆಗೂ ಬಿಜಾಪುರ ಜಿಲ್ಲೆಯ ಉತ್ತರ ಪಶ್ಚಿಮ ಕೆಲವು ಪ್ರದೇಶಗಳು.

ನನ್ನ ಅಧ್ಯಯನಕ್ಕೆ ಆರಿಸಿಕೊಂಡ ಭಾಷೆ ಬೀದರ ಜಿಲ್ಲೆಯ ಭಾಷೆಯಾಗಿದೆ. ಬೀದರ ಜಿಲ್ಲೆಯ ದೇಶಿಯತೆಯ ಸೊಗಡನ್ನು ಅವರ ಕಥೆಗಳಲ್ಲಿ ನಾವು ಕಾಣುತ್ತೇವೆ. ಕಥೆಗಾರರ ಸೊಗಡನ್ನು ಅವರ ಕಥೆಗಳಲ್ಲಿ ನಾವು ಕಾಣುತ್ತೇವೆ. ಕಥೆಗಾರರ ಕಥೆಗಳಲ್ಲಿ ಬಳಸಿರುವ ಭಾಷೆ, ಆಡುನುಡಿ , ದ್ವಿರುಕ್ತಿ, ಪ್ರತಿಧ್ವನಿ ಶಬ್ದಗಳು, ಗಾದೆ ಮಾತುಗಳು ಕಥೆಗಾರರ ಕಥೆಗಳ ಶೈಲಿಗೆ ವಿಶೇಷ ಮೆರುಗು ತಂದಿವೆ. ಸಂಭಾಷಣೆ ಎಲ್ಲ ತಂತ್ರದ ಬಳಕೆಯಿಂದ ಅವರ ಶೈಲಿಗೆ ಹೆಚ್ಚಿನ ಸಾಮರ್ಥ್ಯ ಒದಗಿದೆ.

---

೧. ಶಬ್ದಮಣಿ ದರ್ಪಣ ಸೂತ್ರ ೧೩.
೨. ಕನ್ನಡ ಕಲಾವಾಣಿಜ್ಯ ಸಂವಹನ ಪುಟ ಸಂಖ್ಯೆ ೫

## ➜ಭಾಷೆ ಶೈಲಿ :-

ಬೀದರ ಜಿಲ್ಲೆಯ ಭಾಷೆಯಲ್ಲಿ ಹಿಂದಿ, ಉರ್ದು, ಮೋಡಿ, ಮರಾಠಿ, ತೆಲುಗು ಮತ್ತು ಇಂಗ್ಲೀಷ ಪದಗಳು ಸೇರಿಕೊಂಡು ಸಮ್ಮಿಶ್ರಣ ಭಾಷೆಯಾಯಿತು. ಇಲ್ಲಿನ ಕನ್ನಡದಲ್ಲಿ ಹಿಂದಿಯ ಹಲವಾರು ಪದಗಳನ್ನು ನೋಡಬಹುದು. ಗಾಡಿ, ಜಮೀನ, ದುಕಾನ, ಬಂದೂಕ, ಭೀ, ಕುರ್ಚಿ, ಕಚೇರಿ, ಅರ್ಜಿ, ನಸೀಬ್, ಆರಾಮ್, ಇಮಾನದಾರ, ಕಾಗಜ, ದರ್ಬಾರ, ಅಸಲಿ ನಕಲಿ ಮುಂತಾದ ಶಬ್ಧಗಳನ್ನು ಉಪಯೋಗಿಸಿದ್ದಾರೆ.

ಬೀದರ ಜಿಲ್ಲೆಯ ಭಾಷೆ ಶೈಲಿ ತನ್ನದೇ ಆದ ದೇಶಿಯತೆಯ ಸೊಗಡನ್ನು ಕ್ರೋಢೀಕರಿಸಿ ಕೊಂಡಿದೆ. ಅಂತಹ ಭಾಷಾಶೈಲಿಯನ್ನು ನಮ್ಮ ಕಥೆಗಾರರು ಬಳಸಿಕೊಂಡಿದ್ದಾರೆ. ಅವರು ಬಳಸಿರುವ ಭಾಷಾ ಶೈಲಿ ಈ ಕೆಳಗಿನಂತಿವೆ.

## ➤ ಆಡುನುಡಿ : –

ಎಂ.ಜಿ. ದೇಶಪಾಂಡೆಯವರು ತಮ್ಮ ಕಥೆಯಲ್ಲಿ ಬಳಸಿರುವ ಆಡುಮಾತುಗಳು ಈ ಕೆಳಗಿನಂತಿವೆ.

" ಐ ನಿಮ್ಗ ದಮ್ಮ ಆದ ಇಲ್ಲಾ! ಈಗೆ ಎರ್ಡು ತುತ್ತು ಹಾಕ್ಕೊಂಡ್ರಿ ಆಗಳೆ ಬಾವಿ ಕಡೆ ನಡ್ದರಿ. ಅಂಥದ್ಯಾನು ಗಡಿ ಬಿಡಿ? ಇವತ್ತೇನಾದರ ಬಾಯ್ದಾಗ ನೀರ ಬೀಳಾಲತ್ತಾವ?"

('ನಾಗಲಕ್ಷ್ಮೀ' ಪುಟ ಸಂಖ್ಯೆ ೯೬)

'ಚಿಂತಿ ಯಾನಭಿ ಇಲ್ಲ. ರೋಜ ಬಾವಿ ಹೊಡ್ದು ಹೊಡ್ದು ಕೈ ಕಾಲು ನೊಯ್ತಾವು ಅಂತಿರಿ. ಮೈಯು ನೊಯ್ತುವು ಅಂತಿರಿ ಮತ್ತ ಬಡುಭಿ ಆಗಿರಿ ಬಿಸಲ್ದಾಗ. ಅದಕ್ಕ ಕೇಳ್ದೆ. ತಪ್ಪಾತಾ?'

('ನಾಗಲಕ್ಷ್ಮೀ' ಪುಟ ಸಂಖ್ಯೆ ೯೬)

'ಇದ್ದೊಬ್ಬ... ಮಗಂಗ ಧಾಡಿ ಅಂತ ಯಾಕಗೋಳುಹಾಕ್ತಿರಿ ನನ್ನ ಮುಂದ ಅಂವನ ಇಸಯ ಹೇಳಬ್ಯಾಡ್ದಾ". (ಪ್ರಳಯ ಪುಟ ಸಂಖ್ಯೆ ೬೩)

'ನಾರಾಯಣ... ಯಾಕ ಮರಿ ಈಟು ಮುಂಜಾನಿ ಮುಂಜಾನಿಯಾನ ಸಮಾಚಾರ!

('ಪ್ರಳಯ' ಪುಟ ಸಂಖ್ಯೆ ೬೮)

"ಇಲ್ಲ.. ಗಜ್ರಿ ಹಾಂಗ ತಿಳಿಬ್ಯಾಡ ನಮಗೂ ಮರ್ಯಾದಿ ಆದ ಗೌಡರೆ ಆದ ನಾಕ ಮಂದ್ಯಾಗ ನಮ್ಮ ಜವಾಬ್ದಾರಿ ಅದೆ.. ನಂಗೆ ನೀನು ನಂಬು ..."

(ದೇವಯಾನಿ 'ಗಜ್ರಿ' ಪುಟ ಸಂಖ್ಯೆ ೨೭)

"ಯಾಕ ಪೀರಪ್ಪ, ಲಿಂಬೆಮ್ಮ ತೋಲ ರಾತ್ರಿ ಮಾಡಿ ಬಂದೀರಿ ಯಾನ ಇಸಯ ಆದ.."

( 'ಗಜ್ರಿ' ಪುಟ ಸಂಖ್ಯೆ ೩೨)

"ಯ್ಯಾನಾಗಿದ ಬಾಯಿಬಿಟ್ಟು ಪೂರ್ತಿ ಹೇಳಾರ ಹೇಳು"

(ಹೂ ಬಿಡದ ಗುಲಾಬಿ ಗಿಡ 'ಪರಿಹಾರ ಧನ' ಪುಟ ಸಂಖ್ಯೆ ೫೧)

'ಆ ಕಂಡಕ್ಟರ್ ಸಾಬ ಈ ಟಿಕಿಟಿನ ಬೆನ್ನಿನ ಮ್ಯಾಗ ಎರಡು ರೂಪಾಯಿ ಬರಕೊಟ್ಟಾನ, ಬಸ್ಸ ಇಳಿಮುಂದ ಅಂವ ಕೊಡ ರೊಕ್ಕದಲಿ ನಿಂಗ ತಿಲ್ಲಾಕ ಕೊಡಸ್ತೆ'

(ಪಾರಿಜಾತ 'ಹಸಿವು' ಪುಟ ಸಂಖ್ಯೆ ೩೦)

## ➢ ಗಾದೆ ಮಾತುಗಳು:-

- 'ಹೆಣ್ಣು ಹುಟ್ಟರ ಮನಿ ಖಾಲಿ' 'ಕೋಣ ಹುಟ್ಟರ ಕೊಟ್ಟಗಿ ಖಾಲಿ'
  (ಶ್ರಾವಣಿ 'ದೀಪಾ' ಪು.ಸಂ ೪೯)

- 'ಶೇವಂತಿ ಮೈನೆರೆದ ಸುದ್ದಿ ಬಿರುಗಾಳಿ ಹಂಗ ಹಬ್ಬಿ ಗೌಡನ ಕಿವ್ಯಾಗ ಜೇನಾಗಿ ಗೂಡು ಕಟ್ತು'
  (ದೇವಯಾನಿ 'ಹೆಣ' ಪು.ಸಂ.೩೭)

- 'ತಾನೊಂದು ಬಗೆದರೆ ದೈವವೊಂದು ಬಗೆಯಿತೆಂಬಂತೆ'
  (ದೇವಯಾನಿ 'ವಸಂತ ಬಂದಾಗ' ಪು.ಸಂ ೧೧೫)

- "ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು"
  (ಪಾರಿಜಾತ 'ನೈಜಬಾಳು'ಪು.ಸಂ ೪೭)

- 'ಹೆಣ್ಣಿನ ಜೀವನವೆಂದರೆ ದೇವರ ನೀರ ಮೇಲೆ ಬರೆದ ಚಿತ್ರ'
  (ಪಾರಿಜಾತ 'ವಿಪರ್ಯಾಸ ಪು.ಸಂ ೧೯)

- 'ಅಂಧಕಾರದಲ್ಲೊಂದು ಕಂಡ ಮಿಣಿಮಿಣಿಯ ಪುಟ್ಟ ನಕ್ಷತ್ರ ಬೆಳಕಾಗುವವರೆಗೂ ಜತೆಯಾಗಿರುತ್ತದೆ' (ಶ್ರಾವಣಿ 'ಮೌನಿ' ಪು.ಸಂ ೨೧)

- 'ಮೌನ ಕೊಲ್ಲುವಂತೆ, ಮುಳ್ಳಿನ ಮೇಲೆ ಕುಳಿತಂತೆ' ಹೃದಯಕ್ಕೆ ಭೀತಿಯಾಗಿದೆ. ಅಳುವ ಕಂಗಳಲ್ಲಿ ಕುಳಿತಳು' (ಶ್ರಾವಣಿ 'ಮೌನರಾತ್ರಿ' ಪು.ಸಂ ೧೦)

- 'ನೀಲಿ ಮುಗ್ಲು ಮ್ಯಾಲ ಹಕ್ಕಿ ಹಾರಿದಾಗೊಮ್ಮ ರಂಗೋಲಿ ಬಿಡಿಸಿದ್ಹಂಗ'
  ('ದೇವಯಾನಿ ಗಜ್ರ' ಪು.ಸಂ ೨೬)

- 'ಬಾಳಿನಲ್ಲಿ ಕಷ್ಟ-ಸುಖ ನಾಣ್ಯದ ಎರಡು ಮುಖಗಳು'
  (ದೇವಿಯಾನಿ ಹೆಜ್ಜೆಗಳು ಪು.ಸಂ ೯೦)

- 'ಸುಖ ಬಂದಾಗ ಹಿಗ್ಗದೆ ದುಃಖ ಸುಳಿದಾಗ ಕುಗ್ಗದೆ ಬಾಳುವುದೆ ಮನುಷ್ಯ ಸಹಜ ಧರ್ಮ'
  (ದೇವಿಯಾನಿ 'ವೈಶಾಲಿ' ಪು.ಸಂ ೧೧೯)

- 'ಬದುಕು ಹೂ ಹಾಸಿಗೆಯಲ್ಲ, ಮುಳ್ಳಿನ ಕಂತೆ!'
  (ದೇವಯಾನಿ 'ವೈಶಾಲಿ' ಪು.ಸಂ ೧೨೨)

- 'ಬೆಳೆಯುತ್ತಿರುವ ಸಿರಿ ಮೊಳಕೆಯಲ್ಲಿ'
  (ಶ್ರಾವಣಿ 'ಯಾರು ಹಿತವರು' ಪು.ಸಂ ೧೨೯)

- 'ಯೋಚನೆಗಳೇ ಅವಳಿಗೆ ನಿದ್ದೆಯ ಕುಲಾಯಿ ತೊಡಿಸಿದ್ದವು'
  (ಶ್ರಾವಣಿ 'ದೀಪಾ' ಪು.ಸಂ ೫೧)

## ➢ ದ್ವಿರುಕ್ತ ಪದಗಳು :-

ಗಳಗಳ, ಸರಸರ, ಕಿಲಕಿಲ, ಮಿಣಿಮಿಣಿ, ಬಿರಬಿರ, ಪಿಸುಪಿಸು, ಬಿಸಿಬಿಸಿ, ಬಿಕ್ಕಿಬಿಕ್ಕಿ, ನಡಿನಡಿ, ಥವಥವ, ಫಳಫಳ, ಸಫಸಫ, ಪಟಪಟ, ಕುಲುಕುಲು ಮುಂತಾದವು.

## ➢ ಪ್ರತಿಧ್ವನಿ ಶಬ್ದಗಳು :-

ಜಾತಿ ಪಾತಿ, ಬ್ಯಾನಿಗಿಸಿ, ಅಲ್ಲೋಲ ಕಲೋಲ, ಖಟಿ ಪಿಟಿ, ಬಟ್ಟೆ ಬರಿ, ಚಪ್ಲಿ ಗಿಪ್ಲಿ, ರೊಟ್ಟಿ ಗಿಟ್ಟಿ ಮುಂತಾದವು ಹೀಗೆ ಇವರ ಕಥೆಯಲ್ಲಿ ಭಾಷೆ ಶೈಲಿ ಬೀದರ ಜಿಲ್ಲೆಯ ದೇಸಿಯ ಭಾಷೆಯಂತಿದ್ದರೂ ಎಂ. ಜಿ. ದೇಶಪಾಂಡೆಯವರ ಶೈಲಿ ಓದುಗರಿಗೆ ಮನೋರಂಜನೆಯನ್ನು ನೀಡುವಂತಿವೆ.

# ಅಧ್ಯಾಯ ೭.

## ❖ ಸಮಾರೋಪ

ದೇಶಕ್ಕೆ ಸ್ವಾತಂತ್ರ್ಯ ಬಂದರೂ ಕೂಡ, ಹೈದ್ರಾಬಾದ ಸಂಸ್ಥಾನ ಸ್ವಾತಂತ್ರ್ಯತೆಯನ್ನು ಪಡೆದಿರಲಿಲ್ಲ. ಸಂಸ್ಥಾನಗಳ ವಿಲೀನಿಕರಣ ಸಂದರ್ಭದಲ್ಲಿ ಸರ್ದಾರ ವಲ್ಲಭಬಾಯಿ ಪಟೇಲರ ನೇತೃತ್ವದಲ್ಲಿ ಹೈದ್ರಾಬಾದ ಕರ್ನಾಟಕ, ಕರ್ನಾಟಕದಲ್ಲಿ ವಿಲೀನಿಕರಣಗೊಂಡಿತು. ಒಂದು ಕಾಲದಲ್ಲಿ ಸಾಹಿತಿಕವಾಗಿ ಶ್ರೀಮಂತಿಕೆಯನ್ನು ಕಂಡ ನಾಡು ಇಂದು 'ಸಾಹಿತಿಕವಾಗಿ ಹಿಂದುಳಿದ ನಾಡು' ಎಂದು ಹಣೆಪಟ್ಟೆಯನ್ನು ಹೊತ್ತುಕೊಂಡು ನಿಂತಿದೆ. ಅಂಥವರಲ್ಲಿ ಈ ಕಥೆಗಾರರು ಕೂಡ ಒಬ್ಬರಾಗಿದ್ದಾರೆ. ಶ್ರೀಕಾಂತ ಪಾಟೀಲ. ಗುರುನಾಥ ಅಕ್ಕಣ್ಣ, ಸುಬ್ಬಣ್ಣ ಅಂಬೆಸಿಂಗೆ ಎಂ. ಜಿ. ದೇಶಪಾಂಡೆ ಇವರುಗಳು ಸಣ್ಣಕಥೆಯಲ್ಲಿ ಕೃಷಿಗೈದಿದ್ದಾರೆ. ಅವರ ಕಥಾವಸ್ತು ವಿವೇಚನೆಯಲ್ಲಿ ಸಮಾಜದ ಸಂಪೂರ್ಣ ಬದುಕನ್ನು ಹಿಡಿದಿಡುವ ಪ್ರಯತ್ನವನ್ನು ಮಾಡಿದ್ದಾರೆ. ಇವರ ಒಂದೊಂದು ಕಥೆಗಳು, ಸಮಾಜಕ್ಕೆ ಪ್ರೇರಣೆಯನ್ನು ನೀಡುತ್ತವೆ. ಅಷ್ಟೇ ಅಲ್ಲದೇ ಈ ಭಾಗದ ಕೊರಗನ್ನು ನೀಗಿಸುವ ಪ್ರಯತ್ನದಲ್ಲಿದ್ದಾರೆ. ಇವರ ಕಥೆಗಳು ಪುರಸ್ಕಾರ ಅರ್ಹ ಕಥೆಗಳಾಗಿವೆ. ಗುಲಬರ್ಗಾ ವಿಶ್ವವಿದ್ಯಾಲಯವು ದಿ. ಜಯತೀರ್ಥರಾಜ ಪುರೋಹಿತ ಸ್ಮಾರಕದತ್ತಿ ಕನ್ನಡ ಕಥಾಸ್ಪರ್ಧೆ ೧೯೯೭ ಮತ್ತು ೧೯೯೯ರಲ್ಲಿ 'ಹೆಣ', 'ಗಜ್ರ' ಕಥೆಗಳಿಗೆ ಉತ್ತಮ ಪ್ರಶಸ್ತಿ, ಅಮೂಲ್ಯ ಪತ್ರಿಕೆಯಲ್ಲಿ ಉತ್ತಮ ಕಥಾ ಬಹುಮಾನ ದೊರೆತಿದ್ದು, ಈ ಕಥೆಗಾರರಿಗೆ. ಆದರೆ ಇಲ್ಲಿ ಒಂದು ಅಂಶ ಗಮನಿಸಬೇಕು. ಇಲ್ಲಿ ಅಂಥ ಪ್ರತಿಭೆಗಳು ಇದ್ದರೂ ಕೂಡ ಹಿಂದುಳಿದ ಹಣೆಪಟ್ಟಿಯನ್ನು ಯಾಕೆ ಹೊತ್ತು ನಿಂತಿದೆ? ಅನ್ನುವ ಅಂಶ ಇವತ್ತಿನವರೆಗೂ ಅದು ಪ್ರಶ್ನೆಯಾಗಿಯೇ ಉಳಿದಿದೆ. ಈ ನೆಲ ವಚನಕಾರರ ನಾಡು, ತತ್ವಪದಕಾರರ ಬೀಡು, ಪುರಾಣಗಳ ಅದ್ಭುತ. ಇಷ್ಟು ಶ್ರೀಮಂತವಾದ ನಾಡು ಈ ಹೈದ್ರಾಬಾದ ಕರ್ನಾಟಕ ಪ್ರದೇಶವಾಗಿದೆ.

ಇಂತಹ ಪ್ರದೇಶದಲ್ಲಿಯೇ ಮೊಳಕೆಯೊಡೆದ ಪ್ರತಿಭೆಗಳಾಗಿದ್ದಾರೆ. ಈ ಕಥೆಗಾರರು ಇವರ ಕಥೆಗಳಲ್ಲಿ ಗ್ರಾಮೀಣ ಹಾಗೂ ಕೌಟುಂಬಿಕ ಬದುಕು, ಸ್ತ್ರೀ ಸಂವೇದನೆ, ಪ್ರೀತಿ ಪ್ರಣಯ, ದಲಿತ ಹಾಗೂ ಬಡವರ್ಗದ ಶೋಷಣೆ, ಮಾನವೀಯ ಸಂವೇದನೆ, ಕಥೆಗಾರರ ದೃಷ್ಟಿಯಲ್ಲಿ ಸಾಮಾನ್ಯ ವಿಷಯ. ಈ ಅಂಶಗಳಿಂದ ಕಥೆಯನ್ನು ವಿಶ್ಲೇಷಿಸಲಾಗಿದೆ. ಗ್ರಾಮೀಣ ಹಾಗೂ ಕೌಟುಂಬಿಕ ಬದುಕು – ಇದರಲ್ಲಿ ಗ್ರಾಮ ಜನಜೀವನ ಗೌಡ, ಕುಲಕರ್ಣಿಯರ ಅನ್ಯಾಯ, ಅತ್ಯಾಚಾರ, ದರ್ಪ, ದಬ್ಬಾಳಿಕೆ, ಜೀತಪದ್ಧತಿ, ಜಾತಿಮತ ಈ ಎಲ್ಲ ಅಂಶಗಳನ್ನು ಇವರ ಕಥೆಗಳಲ್ಲಿ ಕಾಣುತ್ತೇವೆ. ಅಂತಹ ಕಥೆಯಲ್ಲಿ ಎಂ. ಜಿ. ದೇಶಪಾಂಡೆಯವರ 'ಅಪವಾದ' ಈ ಕಥೆಯಲ್ಲಿಯೂ ಬಡವರ್ಗದ ಶೋಷಣೆಯನ್ನು ಚಿತ್ರಿಸಿದ್ದಾರೆ. 'ಪಾರಿಜಾತ' ಕಥಾ ಸಂಕಲನದಲ್ಲಿಯ 'ಹಸಿವು' ಇದರಲ್ಲಿ ಬಡವರ್ಗದ ಒಬ್ಬ ಹೆಣ್ಣುಮಗಳ ಅಸಾಹಾಯಕ ಸ್ಥಿತಿ ಚಿತ್ರಿಸಿದ್ದಾರೆ. ಇಲ್ಲಿ ಬಡವರು ಬಡವರಾಗಿ ಯಾಕೆ ಇರಬೇಕು? ಅವರಿಗೆ ಜೀವನ ಮಾಡುವ ಹಕ್ಕು ಯಾಕೆ ನೀಡುತ್ತಿಲ್ಲ. ಅನ್ನುವ ವಿಷಯ ಕಾಡತೊಡಗುತ್ತದೆ. ಈ ಅಮಾನುಷ ಪದ್ಧತಿಯನ್ನು ಹೊಡೆದೋಡಿಸಲು ನಾವು ಮತ್ತಷ್ಟು ಜಲ್ವಂತರ ಅಂಶವನ್ನು ಸಾಹಿತ್ಯದ ಮೂಲಕ ಹೊರಹಾಕಬೇಕು. ಅಂತಹ ಕಾರ್ಯವನ್ನೇ ಕಥೆಗಾರರು ತಮ್ಮ ಕಥೆಯಲ್ಲಿ ತೋರಿಸಿದ್ದಾರೆ. ಇಲ್ಲಿ ಕಥೆಗರರು ಗ್ರಾಮ ಜೀವನ ಅಥವಾ ಗ್ರಾಮ ಪ್ರದೇಶದಲ್ಲಿ ನಡೆಯುವ ಸಣ್ಣ ಸಣ್ಣ ಅಂಶವನ್ನು ಕೂಡ ಇಲ್ಲಿ ಚಿತ್ರಿಸಿದ್ದಾರೆ.

ಇವರ ಕಥೆಯಲ್ಲಿಯ ಮತ್ತೊಂದು ಅಂಶ 'ದಲಿತ ಮತ್ತು ಬಡವರ್ಗದ ಶೋಷಣೆ : ಇಂದಿನವರೆಗೂ ಈ ವರ್ಗವನ್ನು ತುಳಿತಕ್ಕೆ ಒಳಪಡಿಸಿದ್ದಾರೆ. ಹಿಂದೆ ವ್ಯಕ್ತಿ ಆಧಾರದ ಮೇಲೆ ಕೂಡಿದ ವರ್ಗವು ಬರುಬರುತ್ತಾ, ಜಾತಿ ಪದ್ಧತಿಯಾಗಿ ಮಾರ್ಪಟ್ಟಿತು. ಈ ಪದ್ಧತಿಯೇ ಸಮಾಜದಲ್ಲಿ ಒಂದು ಜಲ್ವಂತರ ಸಮಸ್ಯೆಯಾಗಿ ಕಾಡತೊಡಗಿದೆ. ಇಂತಹ ಅಂಶಗಳನ್ನು ಇಟ್ಟುಕೊಂಡೆ ಕಥೆಗಾರರು ಇಲ್ಲಿ ಕಥೆಗಳನ್ನು ವಿಶ್ಲೇಷಿಸಿದ್ದಾರೆ. ಎಂ. ಜಿ. ದೇಶಪಾಂಡೆಯವರ 'ಹೆಣ' ಅನ್ನುವ ಕಥೆಯಲ್ಲಿ ಗೌಡರ ರುದ್ರನರ್ತನೆಗೆ ಅಮಾಯಕ ಜನರು ಬಲಿಪಶುವಾಗಿರುವ ಚಿತ್ರಣವನ್ನು ಇಲ್ಲಿ ನೀಡಿದ್ದಾರೆ.

ಇವರ ಮತ್ತೊಂದು ಕಥೆ 'ಅಗ್ನಿ ಪ್ರಳಯ' ಈ ಕಥೆ ಸತ್ಯ ಘಟನೆಯ ಆಧಾರಿತವಾದ ಕಥೆಯಾಗಿ ಜೀವನದ ಹಂಗನ್ನು ಮರೆತು ಅನ್ನದ ಬೆನ್ನು ಹತ್ತಿ ತನ್ನ ಪ್ರಾಣವನ್ನೇ ಆಹುತಿ ನೀಡಿದ ಚಿತ್ರಣವನ್ನು ಇಲ್ಲಿ ಅಭಿವ್ಯಕ್ತಪಡಿಸಿದ್ದಾರೆ.

'ಸ್ತ್ರೀ ಸಂವೇದನೆ' ಈ ಅಂಶದಲ್ಲಿ ಸ್ತ್ರೀಯ ಬದುಕಿನ ಚಿತ್ರಣವನ್ನು ನೀಡುವ ಪ್ರಯತ್ನವನ್ನು ಇಲ್ಲಿ ನೀಡಿದ್ದಾರೆ. ಆಕೆಯ ಆತ್ಮಾಭಿಮಾನ, ಸ್ವಾಭಿಮಾನ, ಆತ್ಮಗೌರವ, ಆಕೆಯ ಕಿಚ್ಚು ಮುಂತಾದ ಅಂಶವನ್ನು ಇಲ್ಲಿ ಚಿತ್ರಿಸಿದ್ದಾರೆ.

ಎಂ. ಜಿ. ದೇಶಪಾಂಡೆಯವರ 'ಪ್ರವಚನ' ಈ ಕಥೆಯಲ್ಲಿ ಆಧ್ಯಾತ್ಮಿಕ ನೆಲೆಯಲ್ಲಿ ಹೆಣ್ಣಿನ ಶೋಷಣೆಯನ್ನು ಇಲ್ಲಿ ಚಿತ್ರಿಸಿದ್ದಾರೆ. ಜೊತೆಗೆ ಆ ಹೆಣ್ಣಿನ ಅಸಾಹಯಕತೆಯನ್ನು ಕೂಡ ಇಲ್ಲಿ ಅಭಿವ್ಯಕ್ತಪಡಿಸಿದ್ದಾರೆ. ಎಂ. ಜಿ. ದೇಶಪಾಂಡೆಯವರ 'ಮೌನಿ' ಈ ಕಥೆಯಲ್ಲಿ 'ಮೌನಿ' ಮೌನದಲ್ಲಿಯೇ ತನ್ನ ಎಲ್ಲ ನೋವನ್ನು ನುಂಗುತ್ತಾಳೆ. 'ಜಾತಿ ಅರಿಯದ ಪ್ರೀತಿ' ಇಲ್ಲಿ ಅಂತರಜಾತಿ ವಿವಾಹದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಇವರ ಮತ್ತೊಂದು ಕಥೆ 'ಶಾಂತಿ' ಈ ಕಥೆಯಲ್ಲಿ ಪ್ರೀತಿಯ ಇನ್ನೊಂದು ರೂಪ ತ್ಯಾಗ ಅನ್ನುವ ಅಂಶವನ್ನು ಇಲ್ಲಿ ಚಿತ್ರಿಸಿದ್ದಾರೆ.

"ಮಾನವೀಯ ಸಂವೇದನೆ" ಈ ಕಥೆಯಲ್ಲಿ ಮಾನವನ ಬದುಕಿಗೆ ಸಂಬಂಧಪಟ್ಟ ಎಲ್ಲ ಅಂಶವನ್ನು ಈ ವಸ್ತುವಿನಲ್ಲಿ ಅಭಿವ್ಯಕ್ತಗೊಂಡಿದೆ. ಎಂ. ಜಿ. ದೇಶಪಾಂಡೆಯವರ 'ಔದಾರ್ಯ' ಈ ಕಥೆಯಲ್ಲಿ ಮಾನವೀಯ ಸಂಬಂಧಗಳ ತುಲನೆಯನ್ನು ತೋರಿಸಿದ್ದಾರೆ. ಇವರ ಮತ್ತೊಂದು ಕಥೆ 'ಪರಿಣಾಮ'. ಈ ಕಥೆಯನ್ನು ಜೀವನ ಎಂಬ ಚಕ್ರದಲ್ಲಿ ಹೊಂದಿಕೆ ಅನ್ನುವುದು ಇರದೇ ಹೋದರೆ ಬಾಳು ದುರಂತ ಅನ್ನುವುದನ್ನು ಇಲ್ಲಿ ಚಿತ್ರಿಸಿದ್ದಾರೆ. ಅದೇ 'ಅಂತಃಕರಣ' ಕಥೆಯಲ್ಲಿ ಮಾನವೀಯ ಸಂಬಂಧ ಮೌಲ್ಯವನ್ನು ಎತ್ತಿ ತೊರಿಸಿದ್ದಾರೆ. ಶಕ್ತಿ ಸಂಬಂಧಕ್ಕಿಂತ ಮಾನವೀಯ ಸಂಬಂಧ ದೊಡ್ಡದ್ದು ಎಂಬುದನ್ನು ಇಲ್ಲಿ ಮನಕ್ಕೆ ತಟ್ಟುವಂತೆ ಚಿತ್ರಿಸಿದ್ದಾರೆ.

'ಕಥೆಗಾರರ ದೃಷ್ಟಿಯಲ್ಲಿ ಸಾಮಾನ್ಯ ವಿಷಯ' ಈ ಅಂಶದಲ್ಲಿ ಇತರ ಎಲ್ಲ ಅಂಶಗಳು ಇಲ್ಲಿ ಅಭಿವ್ಯಕ್ತಗೊಂಡಿವೆ. ಎಂ. ಜಿ. ದೇಶಪಾಂಡೆಯವರ 'ಪ್ರಳಯ' ಈ ಕಥೆಯಲ್ಲಿ ಸಂಬಂಧಗಳ ತಲ್ಲಣವನ್ನು ಇಲ್ಲಿ ಚಿತ್ರಿಸಿದ್ದಾರೆ. ಇವರ ಮತ್ತೊಂದು ಕತೆ 'ಸಂಶೋಧನೆ' ಸಂಶೋಧಕನಿಗೆ ಇರಬೇಕಾದ ಅರ್ಹತೆಯ ಬಗ್ಗೆ ಚಿತ್ರಿಸಿದ್ದಾರೆ.

ಹೀಗೆ ಕಥೆಗಾರರು ತಮ್ಮ ಕಥಾ ಸಂಕಲನದಲ್ಲಿ ಸಮಾಜದ ಹತ್ತು ಹಲವು ಮುಖವನ್ನು ಇಲ್ಲಿ ಪರಿಚಯಿಸುವ ಪ್ರಯತ್ನವನ್ನು ಮಾಡಿದ್ದಾರೆ. ಜೀವನದ ವಾಸ್ತವತೆಯ ಅರಿವನ್ನು ಮಾಡಿಸಿದ್ದಾರೆ. ಇವರು ಕೂಡ ಎಲ್ಲಾ ಕಥೆಗಾರರಿಗೂ ಸಮವಾಗುವ ಪ್ರತಿಭೆ ಹೊಂದಿದ್ದಾರೆ ಎಂಬುದನ್ನು ಇವರುಗಳು ಕಥೆಗಳ ಮೂಲಕ ತೋರಿಸಿದ್ದಾರೆ. ಹೈದ್ರಾಬಾದ ಕರ್ನಾಟಕ ಹಿಂದುಳಿದ ಹಣೆಪಟ್ಟಿ ಹೊತ್ತುನಿಂತ ಪ್ರದೇಶವಾಗಿದೆ ಅನ್ನುವ ಅಂಶವನ್ನು ಸಾಹಿತಿಗಳು ತೋರಿಸಿದ್ದಾರೆ. ಇಂದಿಗೂ ಹತ್ತು ಹಲವು ಪ್ರತಿಭೆಗಳು ಈ ನಾಡಿನಲ್ಲಿ ಅಡಗಿಕುಳಿತಿವೆ. ಈ ಪ್ರತಿಭೆಗಳಿಗೆ ಬೆಳಕು ಚೆಲ್ಲುವುದು ಅವಶ್ಯಕವಾಗಿದೆ. ಅಂದಾಗ ಮಾತ್ರ ನಮ್ಮ ಭಾಗದಲ್ಲಿ ಪ್ರಬುದ್ಧ ಸಾಹಿತ್ಯ ಬೆಳೆಯಲು ಸಾಧ್ಯವಾಗುತ್ತದೆ. ನಮ್ಮ ಭಾಗ ಹಿಂದುಳಿದ ಪ್ರದೇಶವಾಗಿದೆ ಎನ್ನುವ ಹಣೆಪಟ್ಟಿಯನ್ನು ತೆಗೆದುಹಾಕಲು ಸಾಧ್ಯವಾಗುತ್ತದೆ.

# ಅನುಬಂಧ

## ☞ಅ) ಕಥೆಗಾರರು ಮತ್ತು ಅವರ ಕಥೆಗಳ ಕುರಿತು ಅಭಿಪ್ರಾಯಗಳು :-

ಎಂ. ಜಿ. ದೇಶಪಾಂಡೆಯವರ ಸಂಯಮಿಯಾಗಿ, ಸಂವೇದ ಶೀಲರಾಗಿ ಸಾಹಿತ್ಯ ಚಿಂತಕರಾಗಿ, ಕನ್ನಡ ಭಾಷೆಯ ಉಳಿವಿಗೆ ಹೋರಾಟಗಾರರಾಗಿ ನನ್ನ ಎದುರು ನಿಲ್ಲುತ್ತಾರೆ. ಜೀವನದಲ್ಲಿ ಆಕಸ್ಮಿಕವಾಗಿ ಎದುರಾದ ನೋವುಗಳನ್ನು ಮರೆತು ಸಾಹಿತ್ಯ ರಚನೆಯಲ್ಲಿ ತೊಡಗಿರುವುದು ಅವರ ಅಪರಿಮಿತ ಸಾಧನೆಯ ಸಂಕೇತವೆಂದೇ ಹೇಳಬೇಕಾಗುತ್ತದೆ.

ಇನ್ನಷ್ಟು ಶ್ರೇಷ್ಠ ಕೃತಿಗಳನ್ನು ಈ ನಾಡಿಗೆ ನೀಡಲಿ. ಅವರ ಆರೋಗ್ಯ, ಆಯಸ್ಸು, ವೃದ್ಧಿಸಲು, ಸಾಹಿತ್ಯ ಕೃಷಿ ತಪಸ್ಸು ಇದ್ದ ಹಾಗೆ ತಪ್ಪಸ್ಸು ಸಿದ್ಧಿಸಬೆಕಾದರೆ ಸಾಧನೆ ಬೇಕು. ಸಾಧನೆ ಗೈಯಬೇಕಾದರೆ ಏಕಾಗ್ರತೆ ಬೇಕು. ಸಾಧನೆ ಗುರಿ ಎರಡನ್ನು ಸಮವಾಗಿಸಿಕೊಂಡು ಸಾಹಿತ್ಯ ಲೋಕದಲ್ಲಿ ಶ್ರೇಷ್ಠ ಕುಸುಮವಾಗಿ ಪಯಣಿಸುತ್ತಿರಿಲಿ, ಇದು ನನ್ನ ಹಾರೈಕೆ.

ಸಣ್ಣಕತೆಗಳ ಶಿಲ್ಪಿ ಎಂ. ಜಿ. ದೇಶಪಾಂಡೆ<br>ಎ.ಜಿ. ರತ್ನ ಕಾಳೆಗೌಡ

ತಮ್ಮ ಒಳ್ಳೆಯ ನಡೆ-ನುಡಿಯಿಂದ ಕನ್ನಡ ಸಂಸ್ಕೃತಿಯ ಶ್ರೇಷ್ಠ ಪ್ರತೀಕರವೆನಿಸಿರುವ ಎಂ. ಜಿ. ದೇಶಪಾಂಡೆ ಬೀದರ ಜಿಲ್ಲೆಯ ಶ್ರೇಷ್ಠ ಸಾಹಿತಿಗಳಲ್ಲಿ ಒಬ್ಬರು. ನಾಡಿಗೆ ಹೆಮ್ಮೆಯ ಪುತ್ರರು. ನಾನು ಅವರಲ್ಲಿ ಕಂಡಿದ್ದು ಕರುಣೆ-ಪ್ರೀತಿ-ಸಜ್ಜನಿಕೆ. ಈ ಅಮೂಲ್ಯ ಗುಣಗಳಿಂದಾಗಿ ಮಾನವನ ಅಂತಃ ಕರಣದ ಹಾಲಿನಿಂದ ನಿರ್ಮಾಣಗೊಂಡಿರುವ ಅಪೂರ್ವ ವ್ಯಕ್ತಿಯೆನಿಸಿದ್ದಾರೆ.

ಕನ್ನಡ ಸಂಸ್ಕೃತಿಯ ಶ್ರೇಷ್ಠ ಪ್ರತೀಕ<br>ಸುರೇಶ ಚನ ಶೆಟ್ಟಿ

ಕಥೆಗಾರನಲ್ಲದ ನಾನು ಈ ಕಥೆಗಳು ಒದಿದ ಮೆಲೆ ನಾನು ಈ ಕಥೆಯ ಮುನ್ನುಡಿ ಬರೆಯಲು ಶ್ರೀ ದೇಶಪಾಂಡೆಯವರ ಒತ್ತಾಯದ ಮೇರೆಗೆ ಬರೆಯುತ್ತಿರುವುದು ನನಗೆ ಹಿರಿಮೆ ಎನಿಸಿದೆ. ಹಿರಿಯ ಸಾಹಿತಿಗಳಾದ ಶ್ರೀ. ಎಂ. ಜಿ. ದೇಶಪಾಂಡೆಯವರಿಂದ ಇನ್ನು ಅನೇಕ ಉತ್ತಮೋತ್ತಮ ಕೃತಿಗಳು ಹೊರ ಬರಲಿ ಮತ್ತು ರಾಜ್ಯಮಟ್ಟದಲ್ಲಿ ಇವರು ಕೀರ್ತಿಗಳಿಸಲೆಂದು ಅಪೇಕ್ಷೆ ನನ್ನದು.

ಹಂಶಕವಿ<br>(ದೇವಿಯಾನಿ ಮುನ್ನುಡಿಯಿಂದ)

ಭ್ರಮೆ, ಪಾರಿಜಾತ (ಮಿನಿ ಕಥಾ ಸಂಕಲನ)ದ ನಂತರ 'ಶ್ರಾವಣಿ' ಕಥಾ ಸಂಕಲನ ಎಂ. ಜಿ. ದೇಶಪಾಂಡೆಯವರು ಪ್ರಕಟಿಸುತ್ತಿದ್ದಾರೆ. ಬೀದರ ಜಿಲ್ಲೆಯ ಬರಹಗಾರರಲ್ಲಿಯೇ ಎಂ. ಜಿ. ದೇಶಪಾಂಡೆಯವರು ಆಡುಮುಟ್ಟದ ಸೊಪ್ಪಿಲ ಇವರು ಬರೆಯದ ಕ್ಷೇತ್ರವಿಲ್ಲ ಎಂಬುದಕ್ಕೆ

ಸಾಕ್ಷಿಯಾಗಿದ್ದಾರೆ. ಮಧ್ಯಮ ವರ್ಗದ ಕುಟುಂಬಗಳ ಬದುಕಿನ ದ್ರವ್ಯ ತಮ್ಮ ಕಥೆಗಳಲ್ಲಿ ಬಳಸಿಕೊಳ್ಳುವ ಇವರು ಕೆಲವು ಕತೆಗಳಲ್ಲಿ ದೇಶಿ ಭಾಷೆಯ ಸೊಗಡು ತರುವ ಇವರ ಪ್ರಯತ್ನ ಗಮನಾರ್ಹವಾದರೂ ಸಹಜತೆ ದಕ್ಕುವುದಿಲ್ಲ.

'ಯೋಚನೆಗಳೆ ಅವಳಿಗೆ ನಿದ್ದೆಯ ಕುಲಾಯಿ ತೊಡಿಸಿದ್ದವು' (ದೀಪಾ), 'ಕತ್ತಲೆಯೆಂಬುದು ಇಬ್ಬರಿಗೂ ಕೌದಿ ಆಗಿತ್ತು' (ಪ್ರಳಯ), 'ಜೀವನ ಕಲ್ಪನೆಯಲ್ಲಿ ಸಾದನೆಯು ಹೌದು' (ಶಾಂತಿ), 'ವಾಸನೆ ರಂಗೋಲಿಯಾದ ಜನಾರ್ಧನ ರಾಯರು' (ವಿಧಿ ಬರೆದ ಕಥೆ), ದೇಶಪಾಂಡೆಯವರ ಜೀವನಾನುಭವದ ಹರಳುಗಟ್ಟುವಿಕೆಯ ಮುಂತಾದ ವಾಕ್ಯಗಳು ಹೃದಯ ಸ್ಪರ್ಶಿಸುತ್ತವೆ.

ನಮ್ಮ ಜಿಲ್ಲೆಯ ಭಗಿರಥ ಪ್ರಯತ್ನದ ಸಾತ್ವಿಕ ಕವಿ, ಕತೆಗಾರ, ಬರಹಗಾರ ಎಂ. ಜಿ. ದೇಶಪಾಂಡೆಯವರ ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚಿನ ಯಶಸ್ಸು ಸಾಧಿಸಲೆಂದು ಹಾರೈಸುವೆ.

ದಿನಾಂಕ ೨೦.೮.೨೦೧೦
ಶಿವಕುಮಾರ ನಾಗವಾರ
(ಶ್ರಾವಣಿಯ ಪ್ರಸ್ತಾವನೆಯಿಂದು)

ಇವರ ಕಥೆಗಳನ್ನು ಓದಗರ ಪಕ್ಕದಲ್ಲಿಟ್ಟುಕೊಂಡು ನೋಡಿದಾಗ, ತೌಲನಿಕವಾಗಿ ಓದಿದಾಗ ಸಿಗುವ ಆನಂದವೇ ವಿಸ್ಮಯಕಾರಿಯಾದುದು. ಇವರ ಎಲ್ಲಾ ಕಥೆಗಳನ್ನು ವರ್ಗೀಕರಿಸಿ ಓದಿದಾಗ ಉಂಟಾಗುವ ಅರ್ಥ ಸಾಧ್ಯತೆಗಳು ಒಂದು ರೀತಿಯಾದರೆ, ಸುಮ್ಮನೆ ಒಂದು ಕಥೆಯನ್ನು, ಕಥೆಗಾರರ ಹೆಸರಿನ ಹಂಗಿಲ್ಲದೆ ಓದಿದಾಗ ಹೊಳೆಯುವ ಅರ್ಥದ ಸರಿ ಇನ್ನೊಂದು ರೀತಿಯದು. ಹೀಗೆ ಕಥಾ ಸಂಧಾನ, ತಂತ್ರ, ಸನ್ನಿವೇಶ, ನಿರೂಪಣೆ ಮುಂತಾದ ಕಾರಣಗಳಿಂದ ಕಥಾ ಸಂಕಲನಗಳಲ್ಲಿಯ ಕಥೆಗಳು ಗಟ್ಟಿಯಾದ ಕಥೆಗಳಾಗಿ ಕಾಣಿಸುತ್ತವೆ. ಇಲ್ಲಿಯ ಕತೆಗಳಲ್ಲಿ ತುಸು ವೈಚಾರಿಕತೆ ಜಾಸ್ತಿ. ಅಲ್ಲಲ್ಲಿ ಪತ್ರಿಕಾ ವರದಿಯ ರೂಪವನ್ನು ಜೀವನದ ನಾನಾ ಮುಖಗಳನ್ನು ತಮ್ಮ ಕಥೆಗಳಿಗೆ ವಸ್ತುವಾಗಿರಿಸಿಕೊಂಡು ಕತೆಯಾಗಿ ಕಟ್ಟಿಕೊಟ್ಟ ರೀತಿ ಶ್ಲಾಘನೀಯ ಅಂಶ. ಈ ಜಿಲ್ಲೆಯ ಸಾಂಸ್ಕೃತಿಕ ನೆಲೆಯ ಅಚ್ಚ ಅಸಲೀ ಅನುಭವಗಳನ್ನು ದಾಖಲು ಮಾಡಿರುವ ರೀತಿಯಿಂದಾಗಿ ಇಲ್ಲಿನ ಕಥೆಗಳು ನಮಗೆ ಆಪ್ತವಾಗುತ್ತವೆ. ಎಲ್ಲಕ್ಕೂ ಹೆಚ್ಚಾಗಿ ವಾಚಕರ ಆಸಕ್ತಿಯನ್ನು ಆಕರ್ಷಿಸುವ ವಿಶೇಷ ಅನುಭವವಿದೆ. ಈ ರೀತಿಯಾಗಿ ದೇಶಪಾಂಡೆಯವರು ಬೀದರ ಜಿಲ್ಲೆಯ ಸತ್ಯ-ಸಾಧ್ಯತೆಗಳನ್ನು ತಮ್ಮ ಕತೆಗಳಲ್ಲಿ ಕಟ್ಟಿ ಕೊಟ್ಟಿದ್ದಾರೆ.

ಕಥೆಗಾರರಾಗಿ ದೇಶಪಾಂಡೆ
ಅಶೋಕ ಕೋರೆ.

ಆ) ಎಂ. ಜಿ. ದೇಶಪಾಂಡೆಯವರ ಕಥಾಸಂಕಲನಗಳು

| ಕ್ರ.ಸಂ. | ಕಥಾಸಂಕಲನಗಳು | ಪ್ರಕಾಶನ / ವರ್ಷ |
| --- | --- | --- |
| ೧ | ಭ್ರಮೆ | ೧೯೮೬ |
| ೨ | ಪಾರಿಜಾತ | ೧೯೯೮ |
| ೩ | ದೇವಯಾನಿ | ೨೦೦೦ |
| ೪ | ಶ್ರಾವಣೆ | ೨೦೦೦ |
| ೫ | ಹೂ ಬಿಡದ ಗುಲಾಬಿ ಗಿಡ | ೨೦೦೩ |

ಆ)

## – : ಪರಾಮರ್ಶನ ಗ್ರಂಥಗಳು : –

| ಕ್ರ.ಸಂ | ಲೇಖಕರು / ಸಂಪಾದಕರು | ಕೃತಿಗಳು | ಪ್ರಕಾಶನ | ವರ್ಷ |
|---|---|---|---|---|
| ೧ | ಎಲ್.ಎಸ್.ಶೇಷಗಿರಿರಾವ | ಹೊಸಗನ್ನಡ ಸಾಹಿತ್ಯ ಚರಿತ್ರೆ | ಅಂಕಿತ ಪುಸ್ತಕ ಬೆಂಗಳೂರು | ೧೯೯೯ |
| ೨ | ಭೈರಪ್ಪ ಎಸ್.ಎಲ್ | ಕಥೆ ಮತ್ತು ಕಥಾವಸ್ತು | ಸಾಹಿತ್ಯ ಭಂಡಾರ ಬೆಂಗಳೂರು | ೧೯೯೯ |
| ೩ | ಶ್ರೀಮತಿ ಸುವರ್ಣ ವಿ.ಹಿರೇಮಠ | ಹೈದ್ರಾಬಾದ ಕರ್ನಾಟಕದ ಸಣ್ಣಕತೆಗಳು ಪಿ.ಎಚ್.ಡಿ. ಪ್ರಬಂಧ | ಕನ್ನಡ ಅಧ್ಯಯನ ಸಂಸ್ಥೆ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ | ೨೦೦೭ |
| ೪ | ಡಾ.ಶ್ರೀಶೈಲ ನಾಗರಾಳ | ಸಣ್ಣಕಥೆಗಳು ಸಂಗ್ರಹ | ಪ್ರಸಾರಾಂಗ ಗುಲಬರ್ಗಾ ವಿ.ಗು | ೨೦೦೯ |
| ೫ | ಹಂಶಕವಿ | ಬೀದರ ಜಿಲ್ಲೆಯ ಆಯ್ದ ಕಥೆಗಳು | ಧರಿನಾಡು ಕನ್ನಡ ಸಂಘ, ೧೯೭೦ಬೀದರ | ೨೦೦೭ |
| ೬ | ಚಿದಾನಂದಮೂರ್ತಿ ಎಂ. | ಸಂಶೋಧನತರಂಗ | ಬೆಂಗಳೂರು ವಿ.ಬೆಂಗಳೂರ | ೧೯೭೦ |
| ೭ | ಕೀರ್ತಿನಾಥ ಕುರ್ತಕೋಟಿ | ಯಗಧರ್ಮ ಮತ್ತು ಸಾಹಿತ್ಯ ದರ್ಶನ | ಮನೋಹರ ಗ್ರಂಥಮಾಲೆ, ಧಾರವಾಡ | ೧೯೯೧ |
| ೮ | ಬಸವರಾಜ ಸಬರದ | ಬೀದರ ಜಿಲ್ಲಾ ಸಾಂಸ್ಕೃತಿ ಅಧ್ಯಯನ | ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ | ೧೯೯೨ |
| ೯ | ಸುಬ್ಬಣ್ಣ ಅಂಬೆಸಿಂಗೆ | ಬೀದರ ಜಿಲ್ಲೆಯ ಕನ್ನಡ ಭಾಷಾ ಕುಸುಮ | ಸಂಗಮ ಪ್ರಕಾಶನ ಏಕಲಾಸಪುರ, ಭಾಲ್ಕಿ | ೧೯೯೬ |
| ೧೦ | ಡಾ. ಜಿ. ಆರ್. ತಿಪ್ಪೇಸ್ವಾಮಿ | ವಿಚಾರ ಸಾಹಿತ್ಯ | ಕರ್ನಾಟಕ ಸಾಹಿತ್ಯ ಅಕಾಡೆಮಿ | ೨೦೦೦ |

ಲೇಖನ : ಬೀದರ ಜಿಲ್ಲಾ ಕಥಾ ಸಾಹಿತ್ಯ – ಗುರುನಾಥ ಅಕ್ಕಣ್ಣ

# ವೈಯಕ್ತಿಕ ಪರಿಚಯ

| | | |
|---|---|---|
| ಹೆಸರು | : | ಎಂ. ಜಿ. ದೇಶಪಾಂಡೆ<br>(ಬೀದರ್ ಜಿಲ್ಲೆ, ತಾಲ್ಲೂಕು ಮತ್ತು ಜಿಲ್ಲೆ ಬೀದರ್) |
| ಪೂರ್ತಿ ಹೆಸರು | : | ಮಾಣಿಕ್ ರಾವ್ ದೇಶಪಾಂಡೆ |
| ಜನನ ಸ್ಥಳ | : | ಬೀದರ್ (ಜಿಲ್ಲೆ ಮತ್ತು ತಾಲ್ಲೂಕು) |
| ಜನನ ತಾರೀಖು | : | ೨೧-೦೩-೧೯೫೨ |
| ಕಾವ್ಯನಾಮ | : | ಲಕ್ಷ್ಮೀಸುತ |
| ವಚನಾಂಕಿತ | : | ಮಾಣಿಕ್ಯ ವಿಠಲ |
| ತಂದೆಯ ಹೆಸರು | : | ಗೋವಿಂದರಾವ್ ದೇಶಪಾಂಡೆ |
| ತಾಯಿಯ ಹೆಸರು | : | ಲಕ್ಷ್ಮೀಬಾಯಿ ದೇಶಪಾಂಡೆ |
| ವಿಳಾಸ | : | ಎಂ. ಜಿ. ದೇಶಪಾಂಡೆ,<br>ಮನೆ ನಂ. ೧೫-೩-೧೦೨, 'ಲಕ್ಷ್ಮೀ ನಿಲಯ', ರಾಂಪೂರೆ<br>ಕಾಲೋನಿ, ಬಿ.ವಿ.ಬಿ. ಕಾಲೇಜ್ ರಸ್ತೆ, ಬೀದರ್ – ೫೮೫ ೪೦೩.<br>(ಕರ್ನಾಟಕ ರಾಜ್ಯ)<br><br>ಮೊಬೈಲ್ ನಂ. : ೮೯೭೧೦೬೭೨೩೩, ೯೮೪೪೧೭೬೧೦೬ |
| ಕುಟುಂಬದ ಮಾಹಿತಿ | : | ಪತ್ನಿ: ಸ್ವ ಶ್ರೀಮತಿ ವೀಣಾ ದೇಶಪಾಂಡೆ<br><br>(ಸ್ವ: ೧೨-೦೪-೨೦೧೦) |
| ಪುತ್ರಿಯರು | : | ೧. ಪ್ರಾಂಜಲಾ ಬಿ.ಎ.,ಬಿ.ಎಡ್.<br>ಪತಿ: ವಿಜಯಕುಮಾರ್ ಬೋರಳಕರ್ ಎಂ.ಸಿ.ಎ.<br><br>೨. ವಾಸಂತಿ ಪಿ.ಜಿ.ಡಿ.ಸಿ.ಎ. ಪತಿ: ಉದ್ಧವ ಜೋಶಿ ಬಿ.ಎ. |
| ಪುತ್ರ | : | ಶ್ರೀಪಾದ ದೇಶಪಾಂಡೆ ಎಂ.ಸಿ.ಎ. |
| ವೃತ್ತಿ | : | ಸಾಹಿತ್ಯ ರಚನೆ ಮತ್ತು ಸಮಾಜ ಸೇವೆ.<br>ಸಾಹಿತ್ಯ ಪ್ರಾರಂಭ – ೧೯೬೮ ರಿಂದ (೪೪ ವರ್ಷಗಳಿಂದ) |
| ಹವ್ಯಾಸಗಳು | : | ಸಾಹಿತ್ಯ, ಸಂಗೀತ, ಆಧ್ಯಾತ್ಮಿಕ ಚಿಂತನೆ ಜೊತೆಗೆ ಬಡವರ<br>ದೀನದಲಿತರ ಬಗ್ಗೆ ಕಾಳಜಿ<br>ಹಾಗೂ ಅಂಥ ಮಕ್ಕಳ ಬಗ್ಗೆ ಸಹಾಯ, ಸೇವೆ ನಿರಂತರ. |

# ಕೃತಿಗಳು

| ಕ್ರ.ಸಂ | ಕೃತಿಗಳ ಹೆಸರುಗಳು | ಸಾಹಿತ್ಯ ಪ್ರಕಾರ | ಪ್ರಕಟಣೆಯಾದ ವರ್ಷ |
|---|---|---|---|
| ೧ | ಪ್ರಕಾಶ ಜ್ಯೋತಿ | ಕಾದಂಬರಿ | ೧೯೭೪ |
| ೨ | ಹೂ ಬಾಡಿದಾಗ | ಕಾಂದಬರಿ | ೧೯೭೬ |
| ೩ | ಭ್ರಮೆ | ಕಥೆ | ೧೯೮೬ |
| ೪ | ಅನ್ವೇಷಣೆ | ಕಾವ್ಯ | ೧೯೯೬ |
| ೫ | ಒಲವಿನ ಚಿತ್ತಾರಗಳು | ಮಿನಿಗವಿತೆ | ೧೯೯೭ |
| ೬ | ಪಾರಿಜಾತ | ಮಿನಿಗಥೆ | ೧೯೯೮ |
| ೭ | ಗೀತ ಮಾನಸ | ಭಕ್ತಿ ಕಾವ್ಯ | ೨೦೦೬ |
| ೮ | ಭಕ್ತಿ ಕುಸುಮಾಂಜಲಿ | ಭಕ್ತಿ ಕಾವ್ಯ | ೨೦೦೬ |
| ೯ | ಮನಃಸಾಕ್ಷಿ | ಅನುವಾದ | ೨೦೦೮ |
| ೧೦ | ಕಾವ್ಯ ಚಿತ್ರಾಂಬರಿ | ಕಾವ್ಯ | ೨೦೦೯ |
| ೧೧ | ಚಿಂತನ ಮಂದಾರ | ಚಿಂತನೆಗಳು | ೨೦೦೯ |
| ೧೨ | ಇಂಚರ | ಹನಿಗಾವ್ಯ | ೨೦೦೯ |
| ೧೩ | ವಚನ ಚಂದ್ರಿಕೆ | ವಚನಗಳು | ೨೦೧೦ |
| ೧೪ | ಶ್ರಾವಣಿ | ಕಥಾಸಂಕಲನ | ೨೦೧೦ |
| ೧೫ | ದೇವಯಾನಿ | ಕಥಾಸಂಕಲನ | ೨೦೧೦ |
| ೧೬ | ಅಜ್ಜನ ಹಳ್ಳಿ | ಶಿಶು ಕಾವ್ಯ | ೨೦೧೦ |
| ೧೭ | ವಿರಹ ಪ್ರೀತಿ | ಕಾವ್ಯ | ೨೦೧೦ |
| ೧೮ | ವಿದುರ ನಗರಿ | ಲೇಖನ | ೨೦೧೦ |
| ೧೯ | ಲೋಕಾನುರಾಗಿ ಗುರುಪಾದಪ್ಪ ನಾಗಮಾರಪಳ್ಳಿ | ವ್ಯಕ್ತಿ ಚಿತ್ರ | ೨೦೧೦ |
| ೨೦ | ಸಂತ ಶ್ರೀ ಜಗನ್ನಾಥ ಮಹಾರಾಜ್ | ಚರಿತ್ರೆ | ೨೦೧೦ |

| ೨೧ | ಶ್ರೀ ಹರಿದತ್ತ ಭಜನಾಮೃತ | ಸಮ್ಮಿಶ್ರ ಗೀತೆಗಳು | ೨೦೧೦ |
|---|---|---|---|
| ೨೨ | ಮೀರಾ ಬಾಯಿ | ಐತಿಹಾಸಿಕ ಕಾದಂಬರಿ | ೨೦೧೧ |
| ೨೩ | ಕಥೆಯಾದ ಬದುಕು | ಕಥೆ | ೨೦೧೧ |
| ೨೪ | ಬದುಕು (ಬಸವಣ್ಣನವರ ವಚನಗಳನ್ನಾಧರಿಸಿ) | ಲೇಖನ | ೨೦೧೧ |
| ೨೫ | ದೇವನ ಜೋಕಾಲಿ | ತತ್ವಪದ | ೨೦೧೦ |
| ೨೬ | ನಾಗಲಿಂಗ ತತ್ವಪದಗಳು | ಸಂಪಾದಕೀಯ | ೨೦೧೧ |
| ೨೭ | ಆಶಾ ಕಿರಣ | ಕಾದಂಬರಿ | ೨೦೧೧ |
| ೨೮ | ಯಾವುದು ಸತ್ಯ | ಕಥೆ | ೨೦೧೨ |
| ೨೯ | ಚುಟುಕು ಸೌರಭ | ಸಂಪಾದಕೀಯ | ೨೦೧೨ |
| ೩೦ | ಹನಿ ಹನಿ ಸುಧೆ | ಚುಟುಕು | ೨೦೧೨ |
| ೩೧ | ಪರಾಗ | ಚುಟುಕು | ೨೦೧೨ |
| ೩೨ | ಸಾಹಿತ್ಯರತ್ನಗಳು | ವ್ಯಕ್ತಿ ಚಿತ್ರಗಳು | ೨೦೧೨ |
| ೩೩ | ಚಂದ್ರಹಾರ | ಚುಟುಕು | ೨೦೧೨ |
| ೩೪ | ಒಡೆದ ಕನ್ನಡಿ | ಸಮಗ್ರ ಕಥೆಗಳು | ೨೦೧೨ |
| ೩೫ | ಪ್ರೀತಿ ತಂದ ಫಜೀತಿ | ನಾಟಕ | ೨೦೧೨ |
| ೩೬ | ಧವಳಗಿರಿ | ಕೀರ್ತನೆಗಳು | ೨೦೧೨ |
| ೩೭ | ತವನಿಧಿ | ತತ್ವಪದಗಳು | ೨೦೧೨ |
| ೩೮ | ರತ್ನಧವಳ | ಸಂಪಾದಕಿಯ | ೨೦೧೨ |
| ೩೯ | ಒಂದು ಮತ್ತೊಂದು | ಕಾದಂಬರಿಗಳು | ೨೦೧೨ |
| ೪೦ | ಕಾಮನ ಬಿಲ್ಲು | ಶಿಶುಕವಿತೆಗಳು | ೨೦೧೨ |
| ೪೧ | ಹೂಬಿಡದ ಗುಲಾಬಿ ಗಿಡ | ಕಥಾಸಂಕಲನ | ೨೦೧೩ |

| | | |
|---|---|---|
| ಸಾಹಿತ್ಯ ಕೃಷಿ | : | ೧೯೬೬ರಲ್ಲಿ ಮಾಜಿ ಪ್ರಧಾನಿ ಲಾಲ್ಬಹಾದ್ದೂರ್ ಶಾಸ್ತ್ರೀ ಇನ್ನಿಲ್ಲ ಲೇಖನ. ೧೯೭೨ರಲ್ಲಿ ಬೀದರ್ ಜಿಲ್ಲೆಯ ದಮನ್ ಪತ್ರಿಕೆಯಲ್ಲಿ ಕಾವ್ಯಗಳು ಪ್ರಕಟಣೆ. ೧೯೭೩ರಲ್ಲಿ ಶಾಂತಿ ಕಿರಣ ವಾರ ಪತ್ರಿಕೆ ಭಾಲ್ಕಿಯಲ್ಲಿ ಅನೇಕ ಚುಟುಕು ಕವನಗಳ ಪ್ರಕಟಣೆ. |
| ರಾಜ್ಯ ಮತ್ತು ರಾಷ್ಟ್ರ ಮಟ್ಟದ : ಕರ್ನಾಟಕ, ಪತ್ರಿಕೆಗಳಲ್ಲಿ ಕಾವ್ಯ ಲೇಖನಗಳ ಪ್ರಕಟಣೆ | | ಪಂಚಾಮೃತ, ವಿಕ್ರಮ, ತರಂಗ, ತುಷಾರ, ಮಲ್ಲಿಗೆ, ಸಂಯುಕ್ತ ಪ್ರಜಾವಣಿ, ಮಯೂರ, ವಿಜಯಕರ್ನಾಟಕ, ಖ್ಯಾತಿ, ಕನ್ನಡ ರತ್ನ, ಅನಂತಪ್ರಕಾಶ, ಕರ್ಮವೀರ, ಖಡ್ಗ ಲೇಖನ, ವಿಜಯವಾಣಿ, ಸ್ತ್ರೀಜಾಗೃತಿ, ಗಾವಾನ, ವಚನ ಕ್ರಾಂತಿ, ಬೀದರ್ ರಹಸ್ಯ, ಯುವರಂಗ, ಪರಿಹಾರ, ಜನಪರ, ಪಬ್ಲಿಕ್, ಗೆಳೆಯರ ಚಿಂತನ, ಉತ್ತರ ಕರ್ನಾಟಕ, ಶಾಸನ, ಖಡ್ಗ, ಜನದನಿ, ಶಾಂತಿ ಕಿರಣ, ಮಂಗಳ, ಬೀದರ ಕೋಟೆ, ಹರ್ಷಕಾರಂಜಿ, ನಿಮ್ಮೆಲ್ಲರ ಮಾನಸ, ಸಂಕ್ರಮಣ, ಸುಧಾ, ಅಮೂಲ್ಯ, ಮೊಗವೀರ, ಅನನ್ಯ ನುಡಿ ಸ್ನೇಹ ಸಂಬಂಧ ಅಡ್ವೈಜರ್ ಮುಂತಾದ ಪತ್ರಿಕೆಗಳಲ್ಲಿ. |
| ಬೇರೆ ಬೇರೆ ಸಂಕಲನಗಳಲ್ಲಿ : | | ಎರಡು ಬಳ್ಳಿ ಹೂವು ಹಲವು, ಈ ನೆಲ ಜಲ, ನೂರು ಕವಿ ಕವಿತೆಗಳು, ಬೀದರ್ ಉತ್ಸವ, ಸುಗಂಧ, ಈಶ್ವರ, ಸಾಹಿತ್ಯರತ್ನ, ರತ್ನಧವಳ, ಚಿಂತನ ಚಂದ್ರ, ಎಲ್ಲೇ ಗೌಡ ಬೆಸಗನಹಳ್ಳಿ, ಕಥಾ ಲೋಕ ಕನ್ನಡ ಪತ್ರಿಕೆ ಕಲಾ ಸಂಸ್ಕೃತಿ ವೇದಿಕೆ, ಶಾಹಿನ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ಪ್ರಕಟಿಸಿದ ವಾರ್ಷಿಕ ಸಂಚಿಕೆಗಳಾದ ಹಾಸ್ಯ ಮತ್ತು ಕಾವ್ಯ (೧೯೯೭-೯೮) ಮುಂತಾದು ಪತ್ರಿಕೆ, ಸಂಚಿಕೆ, ಸಂಪಾದನೆಗಳಲ್ಲಿ ಪ್ರಕಟಣೆ. |
| ಪತ್ರಿಕಾ ಸಂಪಾದನೆ | : | ಖ್ಯಾತಿ ವಾರ ಪತ್ರಿಕೆ ಕೈಬರಹ ಲಿಥೋದಲ್ಲಿ ಹೊರಡಿಸಿದ್ದು (೧೯೭೭-೭೯ ರ ವರೆಗೆ), ಕನ್ನಡಾಂಬೆ ಕೈಬರಹ ಪತ್ರಿಕೆ. |
| ಸಂಘ ಸಂಸ್ಥೆಗಳು | : | ಶಾಂತಿ ಕನ್ನಡ ಗೆಳೆಯರ ಬಳಗ (ಕನ್ನಡ ಸಂಘ – ೧೯೭೮)<br>ಸ್ಥಾಪನೆ ಜಿಲ್ಲಾ ಲೇಖಕರ ಬಳಗ, ಬೀದರ್ (ಕನ್ನಡ ಸಂಘ – ೧೯೮೬) ಸ್ಥಾಪನೆ ಮುನ್ನಾ ಎಖೆಳ್ಳಿಯಲ್ಲಿ ಕನ್ನಡ ಸಂಗ ಸ್ಥಾಪನೆ (೧೯೮೮) ಸ್ಥಾಪನೆ ಜ್ಞಾನ ತರಂಗ ವಿಚಾರ ವೇದಿಕೆ, ಮುತ್ತಂಗಿ (೧೯೯೭) ಸ್ಥಾಪನೆ |
| ಪ್ರತಿನಿಧಿ / ಸದಸ್ಯರು | : | ಬೀದರ್ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ಪ್ರತಿನಿಧಿ |

(೧೯೭೯). ಕರ್ನಾಟಕ ವಚನ ಸಾಹಿತ್ಯ ಅಕಾಡೆಮಿ, ಕನಕಪುರ (ಗೌರವ ಸದಸ್ಯ) ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ಅಜೀವ ಸದಸ್ಯರು). ಎಂ. ಜಿ. ದೇಶಪಾಂಡೆ ಪತ್ರಿಷ್ಠಾನ ಸ್ಥಾಪನೆ.

ಗೌರವ ಅಧ್ಯಕ್ಷರು ಕರ್ನಾಟಕ ವಚನ ಸಾಹಿತ್ಯ ಅಕಾಡೆಮಿ ಬೀದರ ಘಟಕ.ಅಧ್ಯಕ್ಷರು ಜಿಲ್ಲಾ ವಚನ ಸಾಹಿತ್ಯ ಪರಿಷತ್ತು ಗೌರವ ಅಧ್ಯಕ್ಷರು ಜಿಲ್ಲಾ ಚುಟುಕು ಸಾಹಿತ್ಯ ಪರಿಷತ್ತು ಬೀದರ ಶ್ರೀಹರಿ ಪ್ರಕಾಶನ, ಅನೀಶ್ ಪ್ರಕಾಶನ, ಕಾವೇರಿ ಪ್ರಕಾಶನ ಮುಂತಾದ ಪ್ರಕಾಶನಗಳ ಸ್ಥಾಪನೆ.

ಪಾಲ್ಗೊಂಡ ಗೋಷ್ಠಿಗಳು : ೧೫೦ ಕಾವ್ಯಗೋಷ್ಠಿಗಳಲ್ಲಿ ಪಾಲ್ಗೊಂಡು ಕಾವ್ಯ ವಾಚನ ಮಾಡಿದ್ದು. ಅಖಿಲ ಭಾರತ ೬೫ನೇ ಕನ್ನಡ ಸಾಹಿತ್ಯ ಸಮ್ಮೇಳನ, ಹಾಸನ (೧೯೯೬) ಕಾವ್ಯಗೋಷ್ಠಿಯಲ್ಲಿ ಕಾವ್ಯ ವಾಚನ.

೭೯ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ (ಫೆ.೯,೧೦,೧೧ ೨೦೧೩) ಕಾವ್ಯಗೋಷ್ಠಿಯಲ್ಲಿ ಕಾವ್ಯವಾಚನ ಮಾಡಿದ್ದು.

ಕಾವ್ಯ, ಕುಂಚ, ಗಾಯನ (೦೮-೦೧-೨೦೧೩ ರಂಗಮಂದಿರದಲ್ಲಿ) ಧ್ವನಿಸುರುಳಿಯಲ್ಲಿ ನನ್ನೊಂದು ಕವಿತೆ ಕಾವ್ಯ, ಚಿತ್ರ, ನೃತ್ಯ, ಸಂಗೀತದಲ್ಲಿ ಆಳವಡಿಕೆ, ಮತ್ತು ಪ್ರದರ್ಶನ. ಬೀದರ್ ತಾಲ್ಲೂಕ ಕ.ಸಾ.ಪ. ಸಮ್ಮೇಳನದಲ್ಲಿ ಕವಿಗೋಷ್ಠಿಯ ಅಧ್ಯಕ್ಷತೆ. ಅನೇಕ ಸಂಘ ಸಂಸ್ಥೆಗಳ ಸಾಹಿತ್ಯ ಸಮಾರಂಭಗಳಲ್ಲಿ ಅಧ್ಯಕ್ಷರು, ಅತಿಥಿ, ನಿರೂಪಕ, ಮುಂತಾದ ರೀತಿಯಲ್ಲಿ ವೇದಿಕೆ ಮೇಲೆ ಸಾಹಿತ್ಯ ಕುರಿತಂತೆ ಚರ್ಚೆ ಮಾಡಿದ್ದು.

ಎಂ.ಜಿ.ದೇಶಪಾಂಡೆ ಪ್ರತಿಷ್ಠಾನದ ವತಿಯಿಂದ ಬೀದರಿನ ಅನೇಕ ಭಾಗಗಳಲ್ಲಿ ಕವಿಗೋಷ್ಠಿ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಕನ್ನಡ ಭಾಷೆ ಕುರಿತಂತೆ ಸಾಹಿತ್ಯ ಆರಾಧಕರ ಕುರಿತಂತೆ ಚಿಂತನೆ-ಮಂಥನೆಗಳ ಕೈಕೊಂಡಿದ್ದು. ಜೊತೆಗೆ ನೂರಾರು ಕಲಾವಿದರನ್ನು ಗುರ್ತಿಸಿ ಪ್ರತಿಷ್ಠಾದಿಂದ ಸನ್ಮಾನ ಪತ್ರಗಳನ್ನು ನೀಡಿದ್ದು.

ಸಮ್ಮೇಳನಗಳ ಸರ್ವಾಧ್ಯಕ್ಷರು: ಧರಿನಾಡು ಕನ್ನಡ ಸಂಘ ಕೇಂದ್ರ ಸಮಿತಿ ಬೀದರ ವತಿಯಿಂದ ದಿ.೦೬-೦೩-೨೦೧೧ ರಲ್ಲಿ ಪ್ರಪ್ರಥಮ ಜಿಲ್ಲಾ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಸನ್ಮಾನ ಗೌರವ ಅಭಿನಂದನೆ ಪತ್ರ ಸಮರ್ಪಣೆ

ಬೆಂಗಳೂರು ಚುಟುಕು ಸಾಹಿತ್ಯ ಪರಿಷತ್ತು. ಬೀದರ ಘಟಕದ ವತಿಯಿಂದ ದಿನಾಂಕ ೧೯-೦೮-೨೦೧೨ ರಂದು ಪ್ರಪ್ರಥಮ ಜಿಲ್ಲಾ ಚುಟುಕು ಸಾಹಿತ್ಯ ಸಮ್ಮೇಳದ ಸರ್ವಾಧ್ಯಕ್ಷರಾಗಿ. ಜಿಲ್ಲೆಯ ಅಭಿಮಾನಿಗಳಿಂದ ಸನ್ಮಾನ . ಬೀದರ್ ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು ವತಿಯಿಂಧ ದಿ: ೩೦-೦೭-೨೦೧೩ ರಲ್ಲಿ ತಾ.ಕ.ಸಾ. ಸಮ್ಮೇಳನದ ಸರ್ವಾಧ್ಯಕ್ಷರನ್ನಾಗಿ ಮಾಡಿ ಗೌರವ ಸನ್ಮಾನ.

ಪ್ರತಿಷ್ಠಾನ : ಶ್ರೀಎಂ. ಈ ದೇಶಪಾಂಡ ಪ್ರತಿಷ್ಠಾನದ ವತಿಯಿಂದ ವಿವಿಧ ಕ್ಷೇತ್ರಗಳಲ್ಲಿಸಾಧನೆಗೈದ (೧೨೬) ಸಾಧಕರಿಗೆ ಅವರನಾಮದಮೇಲೆ, ನಾಮವರ್ಣಾರ್ಥ ಎಂಬ ಹೆಸರಿನಿಂದ ಪ್ರಶಸ್ತಿ ಪ್ರದಾನ ಮಾಡಲಾಗಿದೆ.

ಪ್ರಶಸ್ತಿ ಸನ್ಮಾನಗಳು : ಬೀದರ್ ಜಿಲ್ಲಾ ಆಡಳಿತದಿಂದ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ – ೨ ಸಲ ನೀಡಲಾಗಿದೆ. (೧೯೯೭ ಮತ್ತು ೧೯೯೯)
ಗುಲ್ಬರ್ಗಾ ವಿಶ್ವವಿದ್ಯಾಲಯ ರಾಜ್ಯೋತ್ಸವ ಸಮಾರಂಭದಲ್ಲಿ ಉತ್ತಮ ಕಥೆಗಳಾದ 'ಹೆಣ', 'ಗಜಿರಿ' – ಇವುಗಳಿಗೆ ಉತ್ತಮ ಕಥಾ ಪ್ರಶಸ್ತಿ.

ಸಂಕ್ರಮಣ ಕಾವ್ಯ ಸ್ಪರ್ದೆಯಲ್ಲಿ ಹನಿ ಕಾವ್ಯ ಪ್ರಶಸ್ತಿ.

ಮೊಗವೀರ ಪತ್ರಿಕೆಯಲ್ಲಿ ಉತ್ತಮ ಕಥಾ ಪ್ರಶಸ್ತಿ.

ಅಮೂಲ್ಯ ಪತ್ರಿಕೆಯಲ್ಲಿ ಉತ್ತಮ ಕಥಾ ಪ್ರಶಸ್ತಿ

ಕನ್ನಡ ಪತ್ರಿಕಾ ಕಲಾ ಸಂಸ್ಕೃತಿ ವೇದಿಕೆ, ಬೆಂಗಳೂರುದಲ್ಲಿ 'ದೀಪಾ' ಕಥೆಗೆ ರಾಜ್ಯಮಟ್ಟದ ಪ್ರಶಸ್ತಿ.

ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ವತಿಯಿಂದ ದಿ:೨೭,೨೮ ಮತ್ತು ೨೯ ಜನವರಿ ೨೦೦೬ ರಲ್ಲಿ ಅಖಿಲ ಭಾರತ ೭೨ ನೆಯ ಕ.ಸಾ. ಸಮ್ಮೇಳನ (ಬೀದರ)ದಲ್ಲಿ ಸನ್ಮಾನ.

ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ವತಿಯಿಂದ ದಿ:೯,೧೦ ಮತ್ತು ೧೧ ಫೆಬ್ರುವರಿ ೨೦೧೩ರಲ್ಲಿ ಜರುಗಿದ ಅಖಿಲ ಭಾರತ ಕ.ಸಾ. ಸಮ್ಮೇಳನ ಕವಿಗೋಷ್ಠಿ ೧ ರಲ್ಲಿ ಪಾಲ್ಗೊಂಡು ಕಾವ್ಯ ವಚನ ಮಾಡಿದ್ದು.

ಭಾರತ ವಿಕಾಸ ಪರಿಷತ್ತ ಕ್ರಾಂತಿಯೋಗಿ ಶಾಖೆ ಬೀದರ ವತಿಯಿಮದ ದಿನಾಂಕ ೯.೮.೨೦೧೩ ರಂದು ಸನ್ಮಾನ.

ಶರಣ ಸಂಸ್ಕೃತಿ ಉತ್ಸವ ೨೦೧೩ ಗೌರವ ಸನ್ಮಾನ.

ದೇವಯಾನಿ ಕಥಾಸಂಕಲನಕ್ಕೆ ಗುಲ್ಬಗಾ ವಿಶ್ವವಿದ್ಯಾಲಯದಿಂದ ರಾಜ್ಯೋತ್ಸವ ಪ್ರಶಸ್ತಿ ಮತ್ತು ಇದೇ ಕಥಾ ಸಂಕಲನಕ್ಕೆ ಕರ್ನಾಟಕ ಜನ ಸೇವಾ ಮತ್ತು ಗ್ರಾಮೀಣಾಭಿವೃದ್ಧಿ ಸಂಸ್ಥೆವತಿಯಿಂದ ಉತ್ತಮ ಕಥಾ ಪ್ರಶಸ್ತಿ.

ಚುಟುಕು ಸಾಹಿತ್ಯ ಪರಿಷತ್, ಹುಮನಾಬಾದ್‌ದಿಂದ ಚುಟುಕು ಸಿರಿ ಪ್ರಶಸ್ತಿ.

ವಿದ್ಯಾರಣ್ಯ ಸಾಹಿತ್ಯ ಮಂದಿರ, ಬಳ್ಳಾರಿಯಿಂದ 'ಕುಮಾರ ರಾಮ' ಪ್ರಶಸ್ತಿ–ಕಥೆ 'ದೀಪಾ'.

ಬೀದರ ಜಿಲ್ಲಾ ಜಾನಪದ ಸಮ್ಮೇಳನದಲ್ಲಿ ಸನ್ಮಾನ.

ಅಖಿಲ ಭಾರತ ಕನ್ನಡ ವಚನ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮೇಳನ ೨೦೧೧ ರಲ್ಲಿ ಪ್ರಶಸ್ತಿ ಸನ್ಮಾನ ಬೆಂಗಳೂರಿನಲ್ಲಿ.

ಬೀದರ್ ಜಿಲ್ಲಾ ಪ್ರಥಮ ಜಾನಪದ ಸಮ್ಮೇಳನ, ಬೇಲೂರಿನಲ್ಲಿ ಸನ್ಮಾನ.

ಡಾ॥ ಫ.ಗು.ಹಳಕಟ್ಟಿ ರಾಷ್ಟ್ರೀಯ ಟ್ರಸ್ಟ್(ರಿ) ಮಹಾಲಿಂಗಪುರ ಇವರ ವತಿಯಿಂದ ದಿ: ೨೩,೨೪–೦೨–೨೦೧೩ ರಂದು ವಿಶೇಷ ಸನ್ಮಾನ.

ಕೇರಳ ರಾಜ್ಯ ೫ನೆಯ ಕನ್ನಡ ಸಮ್ಮೇಳನ –೨೦೧೨ ಕಾವ್ಯ ಪ್ರಶಸ್ತಿ.

ಬಾಪು ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ ಸನ್ಮಾನ.

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಔರಾದ್‌ದಲ್ಲಿ ಸನ್ಮಾನ.

ಲಿಂ. ಪೂಜ್ಯ ಡಾ. ಚನ್ನಬಸವ ಪಟ್ಟದ್ದೇವರ ಒಂಭತ್ತನೇ ಸ್ಮರಣೋತ್ಸವದಲ್ಲಿ ಕನ್ನಡ ಸಂಘ ಪ್ರಶಸ್ತಿ.

ಬಸವ ಮುಕ್ತಿ ಮಂದಿರದ ಪರಮ ಪೂಜ್ಯ ಜಗದ್ಗುರು ಶ್ರೀ ಶಿವಯೋಗೇಂದ್ರ ಮಹಾ ಸ್ವಾಮಿಗಳಿಂದ ದಿ:೩೧–೦೮–೨೦೧೧ ರಂದು 'ದಾಸ ಸಾಹಿತಿ' ಬಿರುದು ನೀಡಿ ಸನ್ಮಾನ ನೀಡಿ ಗೌರವಿಸಿದ್ದು. ಮತ್ತೆ ಇದೇ ಸಂಸ್ಥೆವತಿಯಿಂದ ದಿ:೦೮–೦೯–೨೦೧೩ ರಂದು ತತ್ವಪದಕಾರರೆಂದು ಗುರುತಿಸಿ ಸನ್ಮಾನ.

ವಿಶ್ವ ಚೇತನ ಬುದ್ಧ ಎಜುಕೇಷನಲ್ ಮತ್ತು ಚಾರಿಟೆಬಲ್ ಟ್ರಸ್ಟ್ ಹಾಗೂ ಅಗ್ನಿಅಸ್ತ್ರ ಕನ್ನಡ ಪಾಕ್ಷಿಕ ಪತ್ರಿಕೆಯ ವಾರ್ಷಿಕೋತ್ಸವದಲ್ಲಿ 'ವಿಶ್ವಚೇತನ ಬುದ್ಧ ಶಾಂತಿ ಸದ್ಭಾವನಾ ಪ್ರಶಸ್ತಿ – ೨೦೧೨' ಹಾಗೂ 'ಸಾಹಿತ್ಯ ರತ್ನ' ಬಿರುದು.

ವಿಶ್ವಮಾನವ ಧರ್ಮ ಮಹಾ ಸಭಾ ಕೈಲಾಸ್‌ಪುರ್ ವತಿಯಿಂದ ಪ್ರಶಸ್ತಿ. ಶ್ರೀ ಭುವನೇಶ್ವರಿ, ಕನ್ನಡ ಸಾಹಿತ್ಯ ಸಂಘ, ಬೀದರ್, ಇವರ ವತಿಯಿಂದ ಪ್ರಶಸ್ತಿ.

ಅಖಿಲ ಭಾರತ ಪತ್ರಿಕಾ ಸಮಾವೇಶ, ಬೆಂಗಳೂರು ಅವರಿಂದ 'ಕರ್ನಾಟಕ ಜ್ಯೋತಿ' ಪ್ರಶಸ್ತಿ.

ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕನ್ನಡ ಕ್ರಿಯಾಸಮಿತಿ ಬೀದರ ವಿಭಾಗ ಇವರ ವತಿಯಿಂದ ಸನ್ಮಾನ ಹಾಗೂ ನೆನಪಿನ ಕಾಣಿಕ.

೮೦. ಪೂಜ್ಯ ಶ್ರೀ ಜಗದ್ಗುರು ಬಸವಕುಮಾರ ಶಿವಯೋಗಿಗಳವರ ೩೭ನೆಯ ಪುಣ್ಯ ಸ್ಮರಣೋತ್ಸವ ಸಮಾರಂಭದಲ್ಲಿ ಸಾಧಕರಿಗೆ ಸನ್ಮಾನ ಅಡಿಯಲ್ಲಿ ಗೌರವ ಸನ್ಮಾನ.

ಬಸವಜಯಂತಿ ಶತಮಾನೋತ್ಸವ ವರ್ಷಾಚರಣೆ ೨೦೧೨-೨೦೧೩ ಆಚರಣೆ ನಿಮಿತ್ಯ ೭ನೆಯ ಅಖಿಲ ಭಾರತ ಕನ್ನಡ ವಚನ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಮ್ಮೇಳನ – ೨೦೧೨ ದಾವಣಗೆರೆಯಲ್ಲಿ ಸನ್ಮಾನ.

ಬೀದರ ಜಿಲ್ಲಾ ಚುಟುಕು ಸಾಹಿತ್ಯ ಸಮ್ಮೇಳನದಲ್ಲಿ (೧೯-೦೮-೨೦೧೨) ಅಭಿನಂದನ ಪತ್ರ ಸಮರ್ಪಣೆ.

ಕರ್ನಾಟಕ ಜನಸೇವಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಬೀದರ ವತಿಯಿಂದ ೬೭ನೆಯ ಸ್ವಾತಂತ್ರೋತ್ಸವದ ಅಮಗವಾಗಿ ಏರ್ಪಡಿಸಿದ ಕವಿಗೋಷ್ಠಿಯಲ್ಲಿ ಸನ್ಮಾನ.

ಜಿಲ್ಲಾ ಪತ್ರಕರ್ತರ ಸಂಘ(ರಿ) ಬೀದರ ಇವರ ವತಿಯಿಂದ ದಿ : ೩೦-೦೭-೨೦೧೩ ರಂದು "ತವನಿಧಿ ಸಾಹಿತಿ" ಎಂದು ಬಿರುದು ಸನ್ಮಾನ.

ರಾಷ್ಟ್ರಿಯ ಸಂತಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ ಹಾಗೂ ಕರ್ನಾಟಕ ಕಾಲೇಜು, ಸ್ನಾತಕೋತ್ತರ ಕನ್ನಡ

ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ಬೀದರ ಈ ಸಮಾರಂಭದಲ್ಲಿ ಭಾಗವಹಿಸಿ ಕಾವ್ಯ ವಾಚನಕ್ಕೆ ಪ್ರಮಾಣ ಪತ್ರ

ಅಖಿಲ ಕರ್ನಾಟಕ ಪ್ರಥಮ ದಾಸ ಸಾಹಿತ್ಯ ಸಮ್ಮೇಳನ ಬೀದರ (ಜನೇವರಿ ೯.೧೦.೨೦೧೩) ಕಾವ್ಯ ಗೋಷ್ಠಿಯಲ್ಲಿ 'ಆಶಯ ನುಡಿ' ಮುಖ್ಯ ಅತಿಥಿ.

ಬಸವ ಮುಕ್ತಿ ಮಂದಿರ, ಬಸವನಗರ ಬೀದರ ಇವರು ಆಯೋಜಿಸಿದ 'ಹಿಂದಿನ ತತ್ವ ಪದಕಾರರ ಚಿಂತನೆ' ಕುರಿತಂತೆ ಒಂದು ತಿಂಗಳ ಶ್ರಾವಣ ಮಾಸದ ಪ್ರವಚನದ ಸಮಾರಂಭದ ಉದ್ಘಾಟಕರಾಗಿ ದಿ : ೦೬-೦೮-೨೦೧೩ ರಂದು ಪಾಲ್ಗೊಂಡಿದ್ದು.

ಆಧುನಿಕ ವಚನ ಸಾಹಿತ್ಯ ಸಮ್ಮೇಳನ ಶ್ರೀ ಯಲ್ಲಾಲಿಂಗೇಶ್ವರ ಆನಂದಾಶ್ರಮ ಟ್ರಸ್ಟ್ ಸಸ್ತಾಪೂರ (ಫೆ. ೦೭.೦೮.೨೦೧೩) ವತಿಯಿಂದ ಗೌರವ ಸನ್ಮಾನ.

ಬಸವತತ್ವ ಸಮ್ಮೇಳನ ಹಾಗೂ ಮಹಿಳಾ ಮಹಾಪೀಠದ ೭ನೆಯ ವಾರ್ಷೀಕೋತ್ಸವ ಸುಕ್ಷೇತ್ರ ಶರಣಗಿರಿ ಮಲ್ಕಾಪೂರನಲ್ಲಿ ಅನುಭಾವ ಪ್ರವಚನ.

ಕರ್ನಾಟಕ ಜನಸೇವಾ ಗ್ರಾಮೀಣಾಭಿವೃದ್ಧಿ ಸಂಸ್ಥೆ ಬೀದರ ಹಾಗೂ ರಂಗ ತರಂಗ ಮತ್ತು ಸಾಂಸ್ಕೃತಿಕ ಟ್ರಸ್ಟ್ ಇವರ ವತಿಯಿಂದ ದಿನಾಂಕ ೧೪-೦೮-೨೦೧೩ ರಂದು ೬೭ನೆಯ ಸ್ವಾತಂತ್ರೋತ್ಸವದ ಅಂಗವಾಗಿ ಸಾಂಸ್ಕೃತಿಕ ಕವಿಗೋಷ್ಠಿ ಹಾಗೂ ಸನ್ಮಾನ ಸಮಾರಂಭದಲ್ಲಿ ಸನ್ಮಾನ.

ನನ್ನೊಂದು ಕಥೆ 'ಚಾಂದಿನಿ' ಡಿಡಿ೧ ರಲ್ಲಿ ಕಿರುಚಿತ್ರವಾಗಿ ಪ್ರಸಾರ. (೨೦೦೩)

ಚಂದನ ದೂರದರ್ಶನದಲ್ಲಿ 'ಥಟ್ಟಂತ ಹೇಳಿ' ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು.

ಗುಲಬರ್ಗಾ ಆಕಾಶವಾಣಿಯಲ್ಲಿ ನನ್ನ ಅನೇಕ ಚಿಂತನಗಳ ಪ್ರಸಾರ.

ಚಂದನ ದೂರದರ್ಶನಲ್ಲಿ ಸಾಹಿತ್ಯ ಸಂದರ್ಶನ 'ಬೆಳಗು' ಪ್ರಸಾರ ಜೂಲೈ ೨೦೧೨.

ದುರ್ಗಾ ಸ್ಥಾನೀಯ ದೂರದರ್ಶನದಲ್ಲಿ ಸಂದರ್ಶನ.

ವಿಜಯವಾಣಿ ದಿನಪತ್ರಿಕೆಯಲ್ಲಿ ದಿನಾಂಕ : ೩೦-೦೭-೨೦೧೩ ರಂದು ನನ್ನ ಸಾಹಿತ್ಯ ಸಾಧನೆ ಕುರಿತಂತೆ ವಿಶೇಷ ಸಂದರ್ಶನ ಪ್ರಕಟನೆ. ಅನನ್ಯ ಪ್ರಕಾಶನ ಬೆಮಗಳೂರುದಿಂದ 'ಹನಿಹನಿಸುಧೆ' ಮಿನಿಗವನ ಸಂಕಲನಕ್ಕೆ ಪ್ರಶಸ್ತಿ

ಅಲ್ಲದೇ ಇನ್ನೂ ಅನೇಕ ಸಂಘ ಸಂಸ್ಥೆಗಳಿಂದ ಸನ್ಮಾನಗಳು.





ಎಂ.ಜಿ. ದೇಶಪಾಂಡೆ ಅವರಿಗೆ ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಸನ್ಮಾನ



ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ತು. ಬೀದರ ತಾಲೂಕು ದ್ವಿತಿಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸಮ್ಮೇಳನಾಧ್ಯಕ್ಷರಾಗಿ ಎಂ.ಜಿ. ದೇಶಪಾಂಡೆ ಅವರಿಗೆ ಸನ್ಮಾನ.



ಗುಲ್ಬರ್ಗಾ ಸಿದ್ಧಲಿಂಗೇಶ್ವರ ಬುಕ್ ಡಿಪೋ ಪ್ರಕಾಶನ ಸಂಸ್ಥೆಯಿಂದ ಎಂ.ಜಿ. ದೇಶಪಾಂಡೆ ಅವರಿಗೆ ಸನ್ಮಾನ.



ಕರ್ನಾಟಕ ಜನ ಸೇವಾ ಗ್ರಾಮೀಣಾಭಿವೃದ್ಧಿ ಸಂಸ್ಥೆಯಿಂದ ಎಂ.ಜಿ. ದೇಶಪಾಂಡೆ ಅವರ "ಕಥೆಯಾದ ಬದುಕು" ಪುಸ್ತಕ ಬಿಡುಗಡೆ.



ಬೀದರ ಜಿಲ್ಲಾ ೧೦ನೇಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಎಂ.ಜಿ.ದೇಶಪಾಂಡೆ ಅವರು ಉಪನ್ಯಾಸ ಮಂಡಿಸುತ್ತಿರುವ ಭಾವ ಚಿತ್ರ